**ಕರ್ನಾಟಕ ವಿಧಾನಸಭೆ**

1) ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 232
2) ಸದಸ್ಯರ ಹೆಸರು : ಶ್ರೀ ಈಶ್ವರ್ ಖಂಡ್ರೆ (ಭಾಲ್ಕಿ)
3) ಉತ್ತರಿಸುವ ದಿನಾಂಕ: : 13.09.2022
4) ಉತ್ತರಿಸುವವರು : ಮಾನ್ಯ ಮುಖ್ಯಮಂತ್ರಿಗಳು

<table>
<tr><th>ಕ್ರ ಸಂ.</th><th>ಪ್ರಶ್ನೆ</th><th>ಉತ್ತರ</th></tr>
<tr><td>ಅ)</td><td>ರಾಜ್ಯದಿಂದ ಕಳೆದ ಮೂರು ವರ್ಷಗಳಲ್ಲಿ ಪ್ರತ್ಯಕ್ಷ ಮತ್ತು ಪರೋಕ್ಷ ತೆರಿಗೆ ಸೇರಿ ಕೇಂದ್ರಕ್ಕೆ ಪಾವತಿಸಿರುವ ವರ್ಷವಾರು ಮೊತ್ತ ಎಷ್ಟು ಮತ್ತು ಅದರಲ್ಲಿ ಪ್ರತಿಶತ ಎಷ್ಟು ಶೇಕಡ ಮೊತ್ತವನ್ನು ರಾಜ್ಯಕ್ಕೆ ವಿವಿಧ ರೂಪದಲ್ಲಿ ನೀಡಲಾಗಿದೆ; (ವರ್ಷವಾರು ವಿವರ ಒದಗಿಸುವುದು)</td><td>ರಾಜ್ಯದಿಂದ ಕಳೆದ ಮೂರು ವರ್ಷಗಳಲ್ಲಿ ಕೇಂದ್ರಕ್ಕೆ ಪಾವತಿಸಿರುವ ಪರೋಕ್ಷ ತೆರಿಗೆ ಈ ಕೆಳಕಂಡಂತೆ ಇರುತ್ತದೆ.<br><br>
<table>
<tr><th>ವರ್ಷ</th><th>ಸಿ.ಜಿ.ಎಸ್.ಟಿ.</th><th>ಐ.ಜಿ.ಎಸ್.ಟಿ.</th></tr>
<tr><td></td><td colspan="2">(ರೂ. ಕೋಟಿಗಳಲ್ಲಿ)</td></tr>
<tr><td>2019-20</td><td>19818.76</td><td>27664.97</td></tr>
<tr><td>2020-21</td><td>18186.27</td><td>26713.66</td></tr>
<tr><td>2021-22</td><td>22658.30</td><td>35077.33</td></tr>
</table>
<br>ಪ್ರತ್ಯಕ್ಷ ತೆರಿಗೆ ಮೂಲಕ ಕೇಂದ್ರ ಸರ್ಕಾರಕ್ಕೆ ಪಾವತಿಯಾಗುವ ತೆರಿಗೆಯ ಮಾಹಿತಿಯು ರಾಜ್ಯ ಸರ್ಕಾರದ ಬಳಿ ಲಭ್ಯವಿರುವುದಿಲ್ಲ.<br><br>ಕೇಂದ್ರ ಸರ್ಕಾರದಿಂದ ರಾಜ್ಯ ಸರ್ಕಾರಕ್ಕೆ ಬಂದಿರುವ ತೆರಿಗೆಯ ಪಾಲನ್ನು 15ನೇ ಹಣಕಾಸು ಆಯೋಗದ ಹಂಚಿಕೆಯಂತೆ ಶೇ. 3.64ರಷ್ಟು ನೀಡಲಾಗಿರುತ್ತದೆ. ವಿವರಗಳು ಕೆಳಕಂಡಂತಿದೆ.<br><br>Rs. In Crore
<table>
<tr><th>Year</th><th>CGST</th><th>Corporation Tax</th><th>Income Tax</th><th>Wealth Tax</th><th>Customs</th><th>Union Excise Duties</th><th>Service Tax</th><th>Other Taxes & Duties</th><th>Total</th></tr>
<tr><td>2019-20</td><td>8774</td><td>10542</td><td>8261</td><td>0</td><td>1960</td><td>1363</td><td>0</td><td>20</td><td>30919</td></tr>
<tr><td>2020-21</td><td>6236</td><td>6656</td><td>6838</td><td>0</td><td>1110</td><td>714</td><td>119</td><td>21</td><td>21694</td></tr>
<tr><td>2021-22</td><td>9158</td><td>9823</td><td>9624</td><td>3</td><td>2574</td><td>1539</td><td>528</td><td>34</td><td>33284</td></tr>
</table></td></tr>
<tr><td>ಆ)</td><td>ರಾಜ್ಯಗಳಿಗೆ ಕೇಂದ್ರದಿಂದ ನೀಡಲಾಗುತ್ತಿದ್ದ ಜಿ.ಎಸ್.ಟಿ. ಪರಿಹಾರ ನಿಂತ ಬಳಿಕ ರಾಜ್ಯದ ಹಣಕಾಸು ಕೊರತೆ ಸರಿದೂಗಿಸಲು ಸರ್ಕಾರ ಕೈಗೊಂಡಿರುವ ಕ್ರಮದ ವಿವರ ಒದಗಿಸುವುದು?</td><td>ರಾಜ್ಯಕ್ಕೆ ಕೇಂದ್ರದಿಂದ ನೀಡಲಾಗುತ್ತಿದ್ದ ಜಿ.ಎಸ್.ಟಿ ಪರಿಹಾರವು ಜೂನ್ 2022ಕ್ಕೆ ಮುಕ್ತಾಯಗೊಂಡಿರುತ್ತದೆ. ಜಿ.ಎಸ್.ಟಿ. ಪರಿಹಾರವನ್ನು ಮುಂದಿನ 5 ವರ್ಷಗಳಿಗೆ ವಿಸ್ತರಿಸುವಂತೆ ಮಾನ್ಯ ಮುಖ್ಯಮಂತ್ರಿಯವರು ಕೇಂದ್ರ ಸರ್ಕಾರಕ್ಕೆ ಮನವಿ ಸಲ್ಲಿಸಿರುತ್ತಾರೆ. ಆದರೆ, ಕೇಂದ್ರ ಸರ್ಕಾರದಿಂದ ಮತ್ತು ಜಿ.ಎಸ್.ಟಿ. ಮಂಡಳಿಯಿಂದ ಈವರೆಗೂ ಜಿ.ಎಸ್.ಟಿ. ಪರಿಹಾರ ವಿಸ್ತರಣೆ ಬಗ್ಗೆ ಯಾವುದೇ ನಿರ್ಧಾರವಾಗಿರುವುದಿಲ್ಲ.<br><br>ಜಿ.ಎಸ್.ಟಿ. ಪರಿಹಾರ ಕೊನೆಗೊಳ್ಳುವುದರಿಂದ ರಾಜ್ಯದ ರಾಜಸ್ವ ಸಂಗ್ರಹಣೆಯು ಕಡಿಮೆಯಾಗಲಿದೆ. ಈ ಕೊರತೆಯನ್ನು ಸರಿದೂಗಿಸಲು ಸರ್ಕಾರವು ಸಂಪನ್ಮೂಲ ಸೃಜಿಸುವ ಕ್ರಮಗಳಿಗೆ ಮುಂದಾಗಲಿದೆ. ತೆರಿಗೆ ಇಲಾಖೆಗಳು ಹೆಚ್ಚು ಕಾರ್ಯಕ್ಷಮತೆಯಿಂದ ಕರ್ತವ್ಯ ನಿರ್ವಹಿಸುವ ಮೂಲಕ ತೆರಿಗೆ ಸೋರಿಕೆಯನ್ನು ತಡೆಗಟ್ಟುವಂತೆ ಕ್ರಮವಹಿಸಲಾಗಿದೆ. ತೆರಿಗೆಯೇತರ ರಾಜಸ್ವವನ್ನು ಮತ್ತಷ್ಟು ಸೃಜಿಸಲು ಸಂಬಂಧಪಟ್ಟ ಆಡಳಿತ ಇಲಾಖೆಗಳೊಂದಿಗೆ ಚರ್ಚಿಸಿ ಕ್ರಮ ಕೈಗೊಳ್ಳಲಾಗುವುದು.</td></tr>
</table>

| | ಇದರೊಂದಿಗೆ ಸರ್ಕಾರವು ವೆಚ್ಚ ನಿರ್ವಹಣೆಗೆ ಹೆಚ್ಚಿನ ಆದ್ಯತೆ ನೀಡಲಿದೆ. ಆಡಳಿತದಲ್ಲಿ ಮಾಹಿತಿ ಮತ್ತು ತಂತ್ರಜ್ಞಾನವನ್ನು ಅಳವಡಿಕೊಳ್ಳುವುದರ ಮೂಲಕ ಇತರೆ ಬದ್ಧ ವೆಚ್ಚಗಳನ್ನು ಕಡಿಮೆ ಮಾಡಲು ಶ್ರಮಿಸಲಾಗುವುದು. ಸಂಪನ್ಮೂಲ ಸೃಜಿಸುವ ವೆಚ್ಚಗಳಿಗೆ ಹೆಚ್ಚಿನ ಅನುದಾನವನ್ನು ಕಲ್ಪಿಸುವ ಮೂಲಕ ಅನುತ್ಪಾದಕ ವೆಚ್ಚವನ್ನು ತಗ್ಗಿಸಲು ಕ್ರಮವಹಿಸಲಾಗುವುದು. |
|---|---|

ಸಂಖ್ಯೆ: ಆಇ 64 ಸಿಎಸ್‌ಎಲ್ 2022

(ಬಸವರಾಜ ಬೊಮ್ಮಾಯಿ)
ಮುಖ್ಯಮಂತ್ರಿ

<u>ಕರ್ನಾಟಕ ವಿಧಾನ ಸಭೆ</u>

| | | |
|---|---|---|
| **ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ** | : | **233** |
| **ಸದಸ್ಯರ ಹೆಸರು** | : | **ಶ್ರೀ ಈಶ್ವರ್ ಖಂಡ್ರೆ (ಭಾಲ್ಕಿ)** |
| **ಉತ್ತರಿಸುವ ದಿನಾಂಕ** | : | **13.09.2022** |
| **ಉತ್ತರಿಸುವ ಸಚಿವರು** | : | **ಮಾನ್ಯ ಜಲಸಂಪನ್ಮೂಲ ಸಚಿವರು** |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| (ಅ) | ಬೀದರ್ ಜಿಲ್ಲೆಯಲ್ಲಿ ಕಾರಂಜಾ ನೀರಾವರಿ ಯೋಜನೆ ಮತ್ತು ಇತರ ನೀರಾವರಿ ಯೊಜನೆಗಳಿಗೆ ದಶಕಗಳ ಹಿಂದೆ ಭೂಸ್ವಾಧೀನ ಪ್ರಕ್ರಿಯೆ ನಡೆದಿರುತ್ತದೆ. ಆದರೆ ಭೂ-ಸ್ವಾಧೀನವೆ ಆಗದೇ ಈ ವರೆಗೆ ರೈತರಿಗೆ ಯಾವುದೇ ಪರಿಹಾರವನ್ನು ನೀಡದೇ ಕಳೆದ ಒಂದು ವರ್ಷದ ಅವಧಿಯಲ್ಲಿ ಭೂಸ್ವಾಧೀನವಾಗಿದೆ ಎಂದು ಪಹಣಿಯಲ್ಲಿ ನಮೂದಿಸಿರುವುದರಿಂದ ರೈತರಿಗೆ ಕಿರುಕುಳ ಆಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ?: ಬಂದಿದ್ದಲ್ಲಿ ರೈತರಿಗೆ ಆಗಿರುವ ಅನ್ಯಾಯ ಸರಿಪಡಿಸಲು ಕೈಗೊಂಡಿರುವ ಕ್ರಮಗಳೇನು? (ವಿವರ ಒದಗಿಸುವುದು) | 1972 ರಿಂದ 2018 ವರೆಗೆ ಕಾರಂಜಾ ಯೋಜನೆ, ಚುಳಕಿನಾಲಾ ಯೋಜನೆ ಮತ್ತು ಮೇಲ್ದಂಡೆ ಮುಲ್ಲಮಾರಿ ಯೋಜನೆಗಳಡಿ ಒಟ್ಟು 24,913 ಎಕರೆ 22 ಗುಂಟೆ ವಿಸ್ತೀರ್ಣ ಭೂಸ್ವಾಧೀನವಾಗಿರುತ್ತದೆ. ಇದರಲ್ಲಿ ಭೂಸ್ವಾಧೀನಗೊಂಡ ಸುಮಾರು 15,920 ಎಕರೆ 11 ಗುಂಟೆ ಜಮೀನನ್ನು ಈಗಾಗಲೇ ನಿಗಮದ ಹೆಸರಿಗೆ ಪಹಣಿಯಲ್ಲಿ ವರ್ಗಾವಣೆ ಆಗಿರುತ್ತದೆ.<br><br>ಮಾನ್ಯ ಉಚ್ಚನ್ಯಾಯಾಲಯ ಧಾರವಾಡ ಪೀಠ ರವರು MFA No. 24012/2013ಕ್ಕೆ ನೀಡಿರುವ ಆದೇಶ ಪ್ರಕಾರ ದಿನಾಂಕ: 30-06-2021 ರಿಂದ 31-05-2022 ರ ವರೆಗೆ ಬಾಕಿ ಉಳಿದಿರುವ ಭೂಸ್ವಾಧೀನ ಪ್ರಕರಣಗಳ ಬಗ್ಗೆ ಪಹಣಿಯಲ್ಲಿ ಅಮಲು ಮಾಡಲಾಗಿದೆ.<br><br>ಹಿಂದಿನ ಭೂ ಮಾಲೀಕರ ಹೆಸರಿಗೆ ಭೂಸ್ವಾಧೀನವಾಗಿರುತ್ತದೆ. ಕೆಲವೊಂದು ಜಮೀನುಗಳ ಸರ್ವೆ ನಂಬರ್‌ಗಳನ್ನು ಕಡಿತಗೊಳಿಸಲಾಗಿದ್ದರಿಂದ, ಕೆಲವು ಭೂ ಮಾಲೀಕರು ಭೂ ಪರಿಹಾರ ಧನ ಪಡೆದ ನಂತರ ಸದರಿ ಭೂಮಿಯನ್ನು ಹಕ್ಕು ಬದಲಾವಣೆ ಮಾಡಿರುತ್ತಾರೆ ಹಾಗೂ ಕೆಲವು ಭೂ ಮಾಲೀಕರು ಮಾರಾಟ ಮಾಡಿರುತ್ತಾರೆ. ಈ ಹಿನ್ನೆಲೆಯಲ್ಲಿ ಪ್ರಸ್ತುತ ಇರುವ ಭೂ ಮಾಲೀಕರಿಗೆ ಭೂಸ್ವಾಧೀನಾಗಿರುವ ಬಗ್ಗೆ ಮಾಹಿತಿ ಇರುವುದಿಲ್ಲಾ. ಸದರಿ ಭೂಸ್ವಾಧೀನವಾಗಿರುವ ಪಹಣಿಯಲ್ಲಿ ನಮೂದು ಮಾಡುವ ಸಲುವಾಗಿ ಕೆಲವೊಂದು ಸರ್ವೆ ನಂಬರಗಳು ಮತ್ತು ಹಿಸ್ಸೆ ನಂಬರಗಳು ತಿದ್ದುಪಡಿ ಆಗಿರುವ ಪ್ರಯುಕ್ತ ತಪ್ಪಾಗಿರುತ್ತವೆ. ಭೂಸ್ವಾಧೀನವಾಗಿರುವ ಭೂ ಮಾಲೀಕರ ಹೆಸರು ಸಮೇತ ಕಡಿತ ಮಾಡಿರುವುದು ಕಂಡುಬಂದಿರುವ ಪ್ರಕರಣಗಳಲ್ಲಿ ರೈತರಿಂದ ಪಹಣಿ ತಿದ್ದುಪಡಿಗಾಗಿ ಅರ್ಜಿಗಳು ಬಂದಿದ್ದು, |
| (ಆ) | ಜಮೀನು ಭೂಸ್ವಾಧೀನವೇ ಅಗದೇ ರೈತರಿಗೆ ಪರಿಹಾರವನ್ನು ನೀಡದೆ ಇರುವ ಜಮೀನನ್ನು ಮತ್ತು ಭೂಸ್ವಾಧೀನದಿಂದ ಕೈಬಿಟ್ಟ ಜಮೀನನ್ನು ದಶಕಗಳ ಬಳಿಕ ಈಗ ಕೆ.ಎನ್.ಎನ್.ಎಲ್.ಗೆ ಭೂ-ಸ್ವಾದೀನವಾಗಿದೆ ಎಂದು ನಮೂದಿಸಿರುವುದರಿಂದ ಆ ಜಮೀನಿನಲ್ಲಿ ಕೃಷಿ ಮಾಡುತ್ತಿರುವ ರೈತರಿಗೆ ಬೆಳೆ ವಿಮಾ ಪರಿಹಾರವೂ ಸಿಗದ ಸ್ಥಿತಿ | |

| | | |
|---|---|---|
| | ನಿರ್ಮಾಣವಾಗಿದ್ದು ಈ ಅನ್ಯಾಯ ಸರಿಪಡಿಸಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು? (ವಿವರ ಒದಗಿಸುವುದು). | ಅವುಗಳಿಗೆ ಭೂ ಮಾಲೀಕರ ಹೆಸರಿಗೆ ಪುನರ್ ಸ್ಥಾಪಿಸಲು, ವಿಶೇಷ ಭೂಸ್ವಾಧೀನಾಧಿಕಾರಿಗಳು ಬೀದರ ಇವರಿಂದ ಸಹಾಯಕ ಆಯುಕ್ತರು ಬೀದರ ಮತ್ತು ಬಸವಕಲ್ಯಾಣ ರವರಿಗೆ ಪತ್ರ ಬರೆಯಲಾಗಿದೆ. |
| (ಇ) | ಭೂಸ್ವಾಧೀನ ಅಗಿರುವ ಜಮೀನಿನ ಬದಲಿಗೆ ಭೂಸ್ವಾಧೀನ ಆಗದ ಮತ್ತು ಪರಿಹಾರ ನೀಡದ ಜಮೀನನ್ನು ಭೂ–ಸ್ವಾಧೀನ ಪಟ್ಟಿಗೆ ಸೇರಿಸಿರುವ ಒಟ್ಟು ಪ್ರಕರಣಗಳ ಸಂಖ್ಯೆ: ಎಷ್ಟು; ಈ ಲೋಪಕ್ಕೆ ಕಾರಣರಾದ ಅಧಿಕಾರಿಗಳ ವಿರುದ್ಧ ಕೈಗೊಂಡಿರುವ ಕ್ರಮಗಳೇನು? (ಮಾಹಿತಿ ಒದಗಿಸುವುದು). | ಈಗಾಗಲೇ ಸ್ವೀಕೃತವಾದ ಒಟ್ಟು 317 ಅರ್ಜಿಗಳ ಪೈಕಿ 159 ಪ್ರಕರಣಗಳಲ್ಲಿ ಪಹಣಿ ತಿದ್ದುಪಡಿ ಮಾಡಲು ಮಾನ್ಯ ಸಹಾಯಕ ಆಯುಕ್ತರು ಬೀದರ ಮತ್ತು ಬಸವಕಲ್ಯಾಣ ರವರಿಂದ ಕ್ರಮಕೈಗೊಳ್ಳಲು ವಿಶೇಷ ಭೂಸ್ವಾಧೀನಾಧಿಕಾರಿಗಳು ಪತ್ರ ಬರೆದಿರುತ್ತಾರೆ. ಬಾಕಿ ಉಳಿದ 158 ಅರ್ಜಿಗಳ ಕುರಿತು ವಿಶೇಷ ಭೂಸ್ವಾಧೀನಾಧಿಕಾರಿಗಳ ಕಾರಂಜಾ ಯೋಜನೆ ಬೀದರ್ ರವರಿಂದ ದಾಖಲೆಗಳ ಪರಿಶೀಲನೆಯಲ್ಲಿದ್ದು, ತದನಂತರ ನಿಯಮಾನುಸಾರ ಸೂಕ್ತ ಕ್ರಮವಹಿಸಲಾಗುವುದು. |

**ಜಸಂಇ 133 ಎಂಎಲ್ಎ 2022**

**(ಗೋವಿಂದ ಎಂ. ಕಾರಜೋಳ)**
ಜಲಸಂಪನ್ಮೂಲ ಸಚಿವರು

## ಕರ್ನಾಟಕ ವಿಧಾನ ಸಭೆ

01. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 234
02. ಮಾನ್ಯ ವಿಧಾನ ಸಭೆಯ ಸದಸ್ಯರ ಹೆಸರು : ಶ್ರೀ ಹೂಲಗೇರಿ. ಡಿ.ಎಸ್. (ಲಿಂಗಸುಗೂರು)
03. ಉತ್ತರಿಸುವ ದಿನಾಂಕ : 13-09-2022.
04. ಉತ್ತರಿಸುವ ಸಚಿವರು : ಗೃಹ ಸಚಿವರು.

<table>
<tr><th>ಕ್ರ. ಸಂ</th><th>ಪ್ರಶ್ನೆ</th><th>ಉತ್ತರ</th></tr>
<tr><td>ಅ</td><td>ರಾಯಚೂರು ಜಿಲ್ಲೆಯ ಲಿಂಗಸುಗೂರು ತಾಲ್ಲೂಕಿನ ಹಟ್ಟಿ ಪೊಲೀಸ್ ಠಾಣೆಯಲ್ಲಿ ಕಳೆದ ಮೂರು ವರ್ಷಗಳಲ್ಲಿ ದಾಖಲಾಗಿರುವ ವಿವಿಧ ಪ್ರಕರಣಗಳು ಎಷ್ಟು;</td><td>ರಾಯಚೂರು ಜಿಲ್ಲೆಯ ಲಿಂಗಸುಗೂರು ತಾಲ್ಲೂಕಿನ ಹಟ್ಟಿ ಪೊಲೀಸ್ ಠಾಣೆಯಲ್ಲಿ ಕಳೆದ ಮೂರು ವರ್ಷಗಳಲ್ಲಿ ದಾಖಲಾಗಿರುವ ವಿವಿಧ ಪ್ರಕರಣಗಳ ಸಂಖ್ಯೆ ಈ ಕೆಳಕಂಡಂತಿದೆ.<br><table><tr><th>ವರ್ಷ</th><th>ಹಟ್ಟಿ ಪೊಲೀಸ್ ಠಾಣೆಗಳಲ್ಲಿ ದಾಖಲಾದ ಪ್ರಕರಣಗಳು</th></tr><tr><td>2019</td><td>223</td></tr><tr><td>2020</td><td>169</td></tr><tr><td>2021</td><td>156</td></tr><tr><td>2022 (ಆಗಸ್ಟ್ 31ರ ವರೆಗೆ</td><td>166</td></tr></table><br>ದಾಖಲಾಗಿರುವ ವಿವಿಧ ಪ್ರಕರಣಗಳ ಮಾಹಿತಿಯನ್ನು <u>ಅನುಬಂಧ</u>ದಲ್ಲಿ ನೀಡಲಾಗಿದೆ.</td></tr>
<tr><td>ಆ</td><td>ಸದರಿ ಪೊಲೀಸ್ ಠಾಣೆ ವ್ಯಾಪ್ತಿಯಲ್ಲಿ ಕೊಲೆ, ಕಳ್ಳತನ ಇನ್ನು ಮುಂತಾದ ವಿವಿಧ ಪ್ರಕರಣಗಳು ಹೆಚ್ಚಾಗುತ್ತಿದ್ದು, ಪೊಲೀಸ್ ಠಾಣಾ ಅಧಿಕಾರಿಗಳು ಕಾನೂನು ಸುವ್ಯವಸ್ಥೆ ಕಾಪಾಡುವಲ್ಲಿ ಸಂಪೂರ್ಣ ವಿಫಲವಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ ಇದನ್ನು ಸರಿಪಡಿಸಲು ಸರ್ಕಾರ ತೆಗೆದುಕೊಂಡ ಕ್ರಮಗಳೇನು;</td><td>➢ ಲಿಂಗಸುಗೂರು ತಾಲ್ಲೂಕಿನ ಹಟ್ಟಿ ಪೊಲೀಸ್ ಠಾಣೆಯಲ್ಲಿ 2019 ನೇ ಸಾಲಿನಲ್ಲಿ 1 ಕೊಲೆ, 2020 ರಲ್ಲಿ 3 ಕೊಲೆ, 2021 ರಲ್ಲಿ 2 ಕೊಲೆ, 2022ರಲ್ಲಿ (31.08.2022ರವರೆಗೆ) 2 ಕೊಲೆಗಳು ಅಗಿದ್ದು, ಕಳೆದ 3 ವರ್ಷಗಳ ಪ್ರಕರಣಗಳನ್ನು ಹೋಲಿಕೆ ಮಾಡಿದಲ್ಲಿ ಕೊಲೆ ಪ್ರಕರಣಗಳು ಹೆಚ್ಚಾಗಿರುವುದು ಕಂಡು ಬರುವುದಿಲ್ಲ.<br>➢ ಲಿಂಗಸುಗೂರು ತಾಲ್ಲೂಕಿನ ಹಟ್ಟಿ ಪೊಲೀಸ್ ಠಾಣೆಯಲ್ಲಿ 2019 ನೇ ಸಾಲಿನಲ್ಲಿ 6 ಕಳ್ಳತನ ಪ್ರಕರಣಗಳು, 2020 ರಲ್ಲಿ 7 ಕಳ್ಳತನ ಪ್ರಕರಣಗಳು, 2021 ರಲ್ಲಿ 5 ಕಳ್ಳತನ ಪ್ರಕರಣಗಳು, 2022ರಲ್ಲಿ (31.08.2022ರವರೆಗೆ) 3 ಕಳ್ಳತನ ಪ್ರಕರಣಗಳು ಅಗಿದ್ದು, ಕಳೆದ 3 ವರ್ಷಗಳ ಪ್ರಕರಣಗಳನ್ನು ಹೋಲಿಕೆ ಮಾಡಿದಲ್ಲಿ ಕಳ್ಳತನ ಪ್ರಕರಣಗಳು ಹೆಚ್ಚಾಗಿರುವುದು ಕಂಡು ಬರುವುದಿಲ್ಲ.</td></tr>
</table>

| | | |
|---|---|---|
| | | ➢ ಅಲ್ಲದೆ ರಾತ್ರಿ ವೇಳೆಯಲ್ಲಿ ಕಳ್ಳತನ, ದರೋಡೆ, ಸುಲಿಗೆ ಹಾಗೂ ಕಾನೂನು ಸುವ್ಯವಸ್ಥೆಗಳು ಜರುಗದಂತೆ ಹೆದ್ದಾರಿ ಗಸ್ತು ವಾಹನಗಳನ್ನು ಹಾಗೂ ದಿನದ 24 ಗಂಟೆ ಯಾವುದೇ ಘಟನೆ ಜರುಗಿದ ತಕ್ಷಣ ಘಟನೆ ಸ್ಥಳಕ್ಕೆ ಹೋಗಿ ಘಟನೆಗೆ ಸಂಬಂಧಿಸಿದಂತೆ ಸ್ಪಂದಿಸಲು ERSS (Emergency Response Support System) ತಾಂತ್ರಿಕ ವ್ಯವಸ್ಥೆವುಳ್ಳ ಸುಸಜ್ಜಿತ ವಾಹನಗಳನ್ನು ಪ್ರತಿ ತಾಲ್ಲೂಕಿಗೆ ಒಂದರಂತೆ ಸರ್ಕಾರದ ಕಡೆಯಿಂದ ಒದಗಿಸಿದ್ದು, ಅದು 24 ಗಂಟೆಗಳ ಕಾಲ ಕರ್ತವ್ಯ ನಿರ್ವಹಿಸುತ್ತಿವೆ. ಅಲ್ಲದೆ ಪ್ರತಿ ತಿಂಗಳು ಜನ ಸಂಪರ್ಕ ಸಭೆಗಳನ್ನು ಏರ್ಪಾಡಿಸಿ ಸಾರ್ವಜನಿಕರ ಕುಂದು ಕೊರತೆಗಳ ಬಗ್ಗೆ ವಿಚಾರಿಸಿ ಪರಿಹಾರಕ್ಕಾಗಿ ಸೂಕ್ತ ಕ್ರಮ ಜರುಗಿಸಲಾಗುತ್ತಿದೆ. |
| ಇ | ರಾಯಚೂರು ಜಿಲ್ಲೆಯ ಲಿಂಗಸುಗೂರು ತಾಲ್ಲೂಕಿನ ಹಟ್ಟಿ ಹಾಗೂ ಮುದಗಲ್ಲ ಪಟ್ಟಣಗಳಲ್ಲಿ ನೂತನ ಅಗ್ನಿಶಾಮಕ ಠಾಣೆ ಪ್ರಾರಂಭಿಸಲು ಸರ್ಕಾರ ತೆಗೆದುಕೊಂಡ ಕ್ರಮಗಳೇನು? | ಲಿಂಗಸುಗೂರು ಅಗ್ನಿಶಾಮಕ ಠಾಣೆಯಿಂದ ಹಟ್ಟಿ ಪಟ್ಟಣಕ್ಕೆ 21 ಕಿ.ಮೀ. ಹಾಗೂ ಮುದಗಲ್ಲ ಪಟ್ಟಣಕ್ಕೆ 25 ಕಿ.ಮೀ. ಅಂತರದಲ್ಲಿ ಲಿಂಗಸುಗೂರು ಅಗ್ನಿಶಾಮಕ ಠಾಣೆಯು ಕಾರ್ಯನಿರ್ವಹಿಸುತ್ತಿದ್ದು, ಸಮರ್ಥವಾಗಿ ಅಗ್ನಿ ಅನಾಹುತಗಳನ್ನು ನಂದಿಸುವ ಕಾರ್ಯ ನಿರ್ವಹಿಸುತ್ತಿರುವುದರಿಂದ ಲಿಂಗಸುಗೂರು ತಾಲ್ಲೂಕಿನ ಹಟ್ಟಿ ಹಾಗೂ ಮುದಗಲ್ಲ ಪಟ್ಟಣಗಳಲ್ಲಿ ನೂತನ ಅಗ್ನಿಶಾಮಕ ಠಾಣೆ ಪ್ರಾರಂಭಿಸಲು ಯಾವುದೇ ಪ್ರಸ್ತಾವನೆ ಇರುವುದಿಲ್ಲ. |

**HD 53 PCQ 2022**

(ಆರಗ ಜ್ಞಾನೇಂದ್ರ)
ಗೃಹ ಸಚಿವರು.

**ಅನುಬಂಧ**

**ರಾಯಚೂರು ಜಿಲ್ಲೆ ಹಟ್ಟಿ ಪೊಲೀಸ್ ಠಾಣೆಯಲ್ಲಿ 2019 ರಿಂದ 2022 (ಆಗಸ್ಟ್ 31ರ ವರಿಗೆ) ದಾಖಲಾಗಿರುವ ವಿವಿಧ ಪ್ರಕರಣಗಳು**

| ಕ್ರ.ಸಂ | ಅಪರಾಧ ಶೀರ್ಷಿಕೆ | 2019 | 2020 | 2021 | 2022 (ಆಗಸ್ಟ್ 31ರ ವರಿಗೆ) |
|---|---|---|---|---|---|
| 1. | Murder | 1 | 3 | 2 | 2 |
| 2. | Attempt to murder | 3 | 6 | 3 | 3 |
| 3. | C.H.Not Amounting to murder | 0 | 0 | 0 | 1 |
| 4. | Dacoity | 0 | 0 | 0 | 0 |
| 5. | Preparation And Assembly For Dacoity | 0 | 1 | 0 | 0 |
| 6. | Robbery | 2 | 0 | 1 | 0 |
| 7. | Chain Snatching | 0 | 0 | 0 | 0 |
| 8. | H.B.T by day | 2 | 0 | 1 | 2 |
| 9. | H.B.T by night | 0 | 3 | 3 | 1 |
| 10. | House theft | 0 | 0 | 0 | 0 |
| 11. | Ordinary Theft | 4 | 4 | 1 | 14 |
| 12. | Cattle thefts | 0 | 0 | 0 | 0 |
| 13. | Receiving stolen Property | 0 | 0 | 0 | 0 |
| 14. | Cheating | 4 | 1 | 1 | 0 |
| 15. | Cr.Br.Trust | 0 | 0 | 0 | 0 |
| 16. | C.C.Notes | 0 | 0 | 0 | 0 |
| 17. | 304(A),IPC | 10 | 10 | 12 | 7 |
| 18. | 279,337,338 IPC | 16 | 15 | 14 | 11 |
| 19. | Rioting | 8 | 14 | 8 | 1 |
| 20. | Hurts | 2 | 11 | 2 | 14 |
| 21. | Acid Attack (326(a)) | 0 | 0 | 0 | 0 |
| 22. | Kidnapping | 2 | 1 | 1 | 0 |
| 23. | 304(B) IPC | 0 | 0 | 0 | 0 |
| 24. | 498 (A) IPC | 1 | 1 | 0 | 6 |
| 25. | 354 IPC Molestation | 7 | 2 | 3 | 7 |
| 26. | Rape | 1 | 0 | 1 | 0 |
| 27. | 353 IPC | 1 | 1 | 2 | 0 |
| 28. | Other IPC | 7 | 14 | 9 | 8 |
| 29. | Arms Act | 0 | 0 | 0 | 0 |
| 30. | Cow Slaughter | 2 | 3 | 0 | 0 |
| 31. | Animal Sacrifice Act | 0 | 0 | 0 | 0 |
| 32. | P.I.T Act | 0 | 0 | 0 | 0 |
| 33. | POCSO | 5 | 2 | 2 | 0 |
| 34. | K.P Act | 60 | 2 | 0 | 0 |

-2

| | | | | | |
|---|---|---|---|---|---|
| 35. | E.C Act | 0 | 1 | 0 | 1 |
| 36. | SC/ST/Act | 4 | 2 | 2 | 5 |
| 37. | Explosive Act | 0 | 0 | 0 | 0 |
| 38. | N.D.P.S AcT | 0 | 0 | 0 | 0 |
| 39. | TADA Act | 0 | 0 | 0 | 0 |
| 40. | PCR Act | 0 | 0 | 0 | 0 |
| 41. | R.P.Act | 1 | 0 | 0 | 0 |
| 42. | Children Act | 0 | 1 | 0 | 0 |
| 43. | Sati Act | 0 | 0 | 0 | 0 |
| 44. | Cinema Autography Act | 0 | 0 | 0 | 0 |
| 45. | Gambling Act | 58 | 41 | 62 | 64 |
| 46. | Excise Act | 7 | 8 | 6 | 5 |
| 47. | D.P Act | 3 | 5 | 6 | 2 |
| 48. | Other Special and Local Laws | 0 | 1 | 4 | 4 |
| 49. | 107 Cr.p.C | 0 | 0 | 0 | 0 |
| 50. | 109 Cr.p.c | 0 | 0 | 0 | 0 |
| 51. | 110 Cr.P.C | 0 | 0 | 0 | 0 |
| 52. | 145 CR.P.C | 0 | 0 | 0 | 0 |
| 53. | 151 CR.p.c | 0 | 0 | 0 | 0 |
| 54. | 41(1)(d) 102 Cr.P.C | 0 | 0 | 0 | 0 |
| 55. | Other Cr.P.C | 0 | 0 | 0 | 0 |
| 56. | Missing Person | 12 | 16 | 10 | 8 |
| | Total | 223 | 169 | 156 | 166 |

# ಕರ್ನಾಟಕ ವಿಧಾನ ಸಭೆ

| | | |
|---|---|---|
| (1) | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 235 |
| (2) | ಮಾನ್ಯ ಸದಸ್ಯರ ಹೆಸರು | ಶ್ರೀ ಹೂಲಗೇರಿ ಡಿ.ಎಸ್.(ಲಿಂಗಸಗೂರು) |
| (3) | ಉತ್ತರಿಸಬೇಕಾದ ದಿನಾಂಕ | 13.09.2022 |
| (4) | ಉತ್ತರಿಸುವ ಸಚಿವರು | ಮಾನ್ಯ ಕಾನೂನು ಸಚಿವರು |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಯಚೂರು ಜಿಲ್ಲೆಯ ಲಿಂಗಸಗೂರು ಪಟ್ಟಣದಲ್ಲಿ ಹೆಚ್ಚುವರಿ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ ಸ್ಥಾಪಿಸಲು ಸರ್ಕಾರ ತೆಗೆದುಕೊಂಡ ಕ್ರಮಗಳೇನು; | ಅಧ್ಯಕ್ಷರು, ವಕೀಲರ ಸಂಘ, ಲಿಂಗಸುಗೂರು, ಇವರು ದಿನಾಂಕ 29.07.2022 ರ ಮನವಿಯಲ್ಲಿ ಲಿಂಗಸುಗೂರಿನಲ್ಲಿ ಹೆಚ್ಚುವರಿ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರ ನ್ಯಾಯಾಲಯವನ್ನು ಸ್ಥಾಪಿಸಲು ಅಥವಾ ಸಿಂಧನೂರಿನಲ್ಲಿ ಹೆಚ್ಚುವರಿ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರ ನ್ಯಾಯಾಲಯವನ್ನು ಸ್ಥಾಪಿಸಿದ್ದಲ್ಲಿ, ಲಿಂಗಸುಗೂರಿಗೆ ವಾರದಲ್ಲಿ ಮೂರು ದಿನಗಳ ಪ್ರಯಾಣದ ನ್ಯಾಯಾಲಯವನ್ನು (itinerary Court) ಮಂಜೂರು ಮಾಡುವಂತೆ ಕೋರಿರುತ್ತಾರೆ. ಪ್ರಸ್ತುತ ಸದರಿ ಪ್ರಸ್ತಾವನೆಯನ್ನು ಮುಂದೂಡಲಾಗಿದೆ. ಹಾಗೂ ರಾಯಚೂರು ಜಿಲ್ಲೆಯಲ್ಲಿ ಸಿಂಧನೂರು, ಲಿಂಗಸುಗೂರು ಮತ್ತು ಮಸ್ಕಿ ತಾಲ್ಲೂಕುಗಳನ್ನೊಳಗೊಂಡಂತೆ 3ನೇ ಹೆಚ್ಚುವರಿ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ (to sit at Sindhanur)ನ್ನು ಸ್ಥಾಪಿಸಲು ದಿನಾಂಕ:07.09.2022ರ ಸರ್ಕಾರಿ ಆದೇಶ ಸಂಖ್ಯೆ: ಲಾ-ಎಲ್‌ಸಿಇ/126/2022 ರಲ್ಲಿ ಸರ್ಕಾರದ ಮಂಜೂರಾತಿ ನೀಡಲಾಗಿದೆ. ಆದ್ದರಿಂದ, ರಾಯಚೂರು ಜಿಲ್ಲೆಯ ಲಿಂಗಸುಗೂರಿನಲ್ಲಿ ಯಾವುದೇ ಹೆಚ್ಚುವರಿ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರ ನ್ಯಾಯಾಲಯವನ್ನು ಸ್ಥಾಪಿಸಿರುವುದಿಲ್ಲ. |
| ಆ) | ಈ ಪಟ್ಟಣದಲ್ಲಿ ನ್ಯಾಯಾಲಯ ಮತ್ತು ಸಿಬ್ಬಂದಿ ವರ್ಗಕ್ಕೆ ವಸತಿ ಗೃಹ ನಿರ್ಮಾಣ ಮಾಡಲು ಸರ್ಕಾರ ತೆಗೆದುಕೊಂಡ ಕ್ರಮಗಳೇನು; | ರಾಯಚೂರು ಜಿಲ್ಲೆಯ ಲಿಂಗಸುಗೂರಿನಲ್ಲಿ ನೂತನ ನ್ಯಾಯಾಲಯ ಸಂಕೀರ್ಣ ನಿರ್ಮಾಣಕ್ಕಾಗಿ ಜಿಲ್ಲಾಧಿಕಾರಿ, ರಾಯಚೂರು ಜಿಲ್ಲೆ ರವರು ಲಿಂಗಸುಗೂರಿನಲ್ಲಿ 3 ಎಕರೆ ಅಳತೆಯ ಭೂಮಿಯನ್ನು ಮಂಜೂರು ಮಾಡಿರುತ್ತಾರೆ. |

| | | |
|---|---|---|
| | | ಲಿಂಗಸುಗೂರಿನ ಕರಡಕಲ್ ಗ್ರಾಮದ ಸರ್ವೆ ನಂ.396 & 397/1 ರಲ್ಲಿನ 3.00 ಎಕರೆ ಜಮೀನಿನಲ್ಲಿ ಜಿ+1 ಮಾದರಿಯಲ್ಲಿ 4 ಕೋರ್ಟ್ ಹಾಲ್‌ಗಳ ನೂತನ ನ್ಯಾಯಾಲಯ ಸಂಕೀರ್ಣವನ್ನು ರೂ.15.82 ಕೋಟಿ ವೆಚ್ಚದಲ್ಲಿ ನಿರ್ಮಿಸಲು ರೇಖಾಚಿತ್ರಗಳು ಮತ್ತು ಅಂದಾಜು ಪಟ್ಟಿಗೆ ಅನುಮೋದನೆ ನೀಡಲಾಗಿದೆ. ಪ್ರಸ್ತುತ ಸದರಿ ಕಾಮಗಾರಿಯು ಟೆಂಡರ್ ಹಂತದಲ್ಲಿದೆ ಮತ್ತು ಮೇಲ್ಕಂಡ ನಿರ್ಮಾಣ ಕಾರ್ಯವು ಇನ್ನೂ ಪ್ರಾರಂಭವಾಗಬೇಕಿದೆ. ಮುಂದುವರಿದು, ಲಿಂಗಸುಗೂರಿನಲ್ಲಿ ಸಿಬ್ಬಂದಿ ವಸತಿ ಗೃಹ ನಿರ್ಮಾಣಕ್ಕೆ ಯಾವುದೇ ಪ್ರಸ್ತಾವನೆ ಇರುವುದಿಲ್ಲ. |
| ಇ) | ಈ ಪಟ್ಟಣದಲ್ಲಿ ವಕೀಲರ ಕಾರ್ಯಾಲಯದ ಕಟ್ಟಡ ನಿರ್ಮಾಣ ಮಾಡಲು ಸರ್ಕಾರ ತೆಗೆದುಕೊಂಡ ಕ್ರಮಗಳೇನು? | ಲಿಂಗಸುಗೂರಿನ ಕರಡಕಲ್ ಗ್ರಾಮದ ಸರ್ವೆ ನಂ.396 & 397/1 ರಲ್ಲಿನ 3.00 ಎಕರೆ ಜಮೀನಿನಲ್ಲಿ ಜಿ+2 ಮಾದರಿಯಲ್ಲಿ ರೂ.290.00 ಲಕ್ಷಗಳ ವೆಚ್ಚದಲ್ಲಿ ವಕೀಲರ ಸಂಘದ ಕಟ್ಟಡವನ್ನು ನಿರ್ಮಿಸಲು ರೇಖಾಚಿತ್ರಗಳು ಮತ್ತು ಅಂದಾಜು ಪಟ್ಟಿಗೆ ಅನುಮೋದನೆ ನೀಡಲಾಗಿದೆ. ಮೇಲ್ಕಂಡ ನಿರ್ಮಾಣ ಕಾರ್ಯವು ಇನ್ನೂ ಪ್ರಾರಂಭವಾಗಬೇಕಿದೆ. |

**ಸಂಖ್ಯೆ: ಲಾ-ಎಲ್‌ಸಿಇ/230/2022**

**(ಜೆ.ಸಿ.ಮಾಧುಸ್ವಾಮಿ)**
**ಕಾನೂನು, ಸಂಸದೀಯ ಮತ್ತು ಶಾಸನ ರಚನೆ ಹಾಗೂ ಸಣ್ಣ ನೀರಾವರಿ ಸಚಿವರು**

# ಕರ್ನಾಟಕ ಸರ್ಕಾರದ ನಡವಳಿಗಳು

**ವಿಷಯ: ರಾಯಚೂರು ಜಿಲ್ಲೆಯಲ್ಲಿ 3ನೇ ಹೆಚ್ಚುವರಿ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು (ಸಿಂದನೂರು ಪೀಠ) ನ್ಯಾಯಾಲಯವನ್ನು ಸ್ಥಾಪಿಸುವ ಬಗ್ಗೆ.**

******

**ಓದಲಾಗಿದೆ:**

ರಿಜಿಸ್ಟ್ರಾರ್ ಜನರಲ್, ಕರ್ನಾಟಕ ಉಚ್ಚ ನ್ಯಾಯಾಲಯ, ಬೆಂಗಳೂರು ಇವರ ಪತ್ರ ಸಂಖ್ಯೆ: GOB.II.103/2017, ದಿನಾಂಕ:21.03.2022 ಮತ್ತು 03.06.2022.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರಗಳಲ್ಲಿ ರಾಯಚೂರು ಜಿಲ್ಲೆಯ ಮಾನ್ವಿ ತಾಲ್ಲೂಕಿನಲ್ಲಿ ಇತ್ಯರ್ಥವಾಗದೆ ಬಾಕಿ ಇರುವ ಪ್ರಕರಣಗಳನ್ನು ಪರಿಗಣಿಸಿ, ರಾಯಚೂರು ಜಿಲ್ಲೆಯಲ್ಲಿ ಸಿಂಧನೂರು, ಲಿಂಗಸುಗೂರು ಮತ್ತು ಮಸ್ಕಿ ತಾಲ್ಲೂಕುಗಳನ್ನೊಳಗೊಂಡಂತೆ 3ನೇ ಹೆಚ್ಚುವರಿ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು (ಸಿಂದನೂರು ಪೀಠ) ನ್ಯಾಯಾಲಯವನ್ನು ಈ ಕೆಳಕಂಡ ಅಧಿಕಾರಿ ಮತ್ತು ಪೂರಕ ಸಿಬ್ಬಂದಿ ಹುದ್ದೆಗಳೊಂದಿಗೆ ಸ್ಥಾಪಿಸಲು ಸರ್ಕಾರದ ಮಂಜೂರಾತಿ ನೀಡುವಂತೆ ರಿಜಿಸ್ಟ್ರಾರ್ ಜನರಲ್, ಕರ್ನಾಟಕ ಉಚ್ಚ ನ್ಯಾಯಾಲಯ ರವರು ಕೋರಿರುತ್ತಾರೆ:-

| ಕ್ರ. ಸಂ. | ಹುದ್ದೆಗಳ ಹೆಸರು | ಹುದ್ದೆಗಳ ಸಂಖ್ಯೆ |
|---|---|---|
| 1 | ಜಿಲ್ಲಾ ನ್ಯಾಯಾಧೀಶರು | 1 |
| 2 | ಶಿರಸ್ತೇದಾರರು | 2 |
| 3 | ತೀರ್ಪು ಬರಹಗಾರರು | 1 |
| 4 | ಪ್ರಥಮ ದರ್ಜೆ ಸಹಾಯಕರು | 5 |
| 5 | ದ್ವಿತೀಯ ದರ್ಜೆ ಸಹಾಯಕರು | 5 |
| 6 | ಬೆರಳಚ್ಚುಗಾರರು | 5 |
| 7 | ಬೇಲೀಫ್ | 4 |
| 8 | ಅಟೆಂಡರ್ | 2 |
| 9 | ಪ್ರೋಸೆಸ್ ಸರ್ವರ್ | 8 |
| 10 | ಪ್ಯೂನ್ಸ್ | 4 |
|  | ಒಟ್ಟು | 37 |

ಮುಂದುವರೆದು, ಸದರಿ ನ್ಯಾಯಾಲಯಕ್ಕೆ ಅವಶ್ಯವಿರುವ ಲೇಖನ ಸಾಮಗ್ರಿ, ವಾಹನ, ಮೂಲಭೂತ ಸೌಕರ್ಯ ಇತ್ಯಾದಿಗಳನ್ನು ಒದಗಿಸುವಂತೆ ಹಾಗೂ ಈ ನ್ಯಾಯಾಲಯಕ್ಕೆ ಕಾರ್ಯವ್ಯಾಪ್ತಿಯನ್ನು ನಿಗಧಿಗೊಳಿಸಿ ಅಧಿಸೂಚನೆ ಹೊರಡಿಸುವಂತೆ ರಿಜಿಸ್ಟ್ರಾರ್ ಜನರಲ್, ಕರ್ನಾಟಕ ಉಚ್ಚ ನ್ಯಾಯಾಲಯ ರವರು ಕೋರಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ, ಸರ್ಕಾರವು ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಲಾ-ಎಲ್‌ಸಿಇ/126/2022**
**ಬೆಂಗಳೂರು, ದಿನಾಂಕ: 07.09.2022.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ರಾಯಚೂರು ಜಿಲ್ಲೆಯಲ್ಲಿ ಸಿಂಧನೂರು, ಲಿಂಗಸುಗೂರು ಮತ್ತು ಮಸ್ಕಿ ತಾಲ್ಲೂಕುಗಳನ್ನೊಳಗೊಂಡಂತೆ 3ನೇ ಹೆಚ್ಚುವರಿ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು (ಸಿಂದನೂರು ಪೀಠ) ನ್ಯಾಯಾಲಯವನ್ನು ಸ್ಥಾಪಿಸಲು ಮತ್ತು ಸದರಿ ನ್ಯಾಯಾಲಯಕ್ಕೆ ಈ ಕೆಳಕಂಡ ವಿವಿಧ ವೃಂದದ 16 ಹುದ್ದೆಗಳನ್ನು ಸೃಜಿಸಿ ಭರ್ತಿ ಮಾಡಿಕೊಳ್ಳಲು ಸರ್ಕಾರದ ಮಂಜೂರಾತಿ ನೀಡಿ ಆದೇಶಿಸಿದೆ.

| ಕ್ರ. ಸಂ. | ಹುದ್ದೆಗಳ ವಿವರ | ಹುದ್ದೆಗಳ ಸಂಖ್ಯೆ | ನೇಮಕಾತಿ ವಿಧಾನ |
|---|---|---|---|
| 1 | ಜಿಲ್ಲಾ ನ್ಯಾಯಾಧೀಶರು | 01 | ವೃಂದ ಮತ್ತು ನೇಮಕಾತಿ ನಿಯಮಗಳನ್ವಯ / ನಿಯೋಜನೆ |
| 2 | ಶಿರಸ್ತೇದಾರರು | 01 | |
| 3 | ತೀರ್ಪು ಬರಹಗಾರರು | 01 | |
| 4 | ಪ್ರಥಮ ದರ್ಜೆ ಸಹಾಯಕರು | 01 | |
| 5 | ದ್ವಿತೀಯ ದರ್ಜೆ ಸಹಾಯಕರು | 02 | |
| 6 | ಬೇಲಿಫ್ | 02 | ಹೊರಗುತ್ತಿಗೆ |
| 7 | ಪ್ರೋಸೆಸ್ ಸರ್ವರ್ | 04 | |
| 8 | ಬೆರಳಚ್ಚುಗಾರರು | 01 | |
| 9 | ಅಟೆಂಡರ್ | 01 | |
| 10 | ಜವಾನರು (ಪ್ಯೂನ್) | 02 | |
| | ಒಟ್ಟು | 16 | |

2. ಈ ಸಂಬಂಧದ ವೆಚ್ಚವನ್ನು ಲೆಕ್ಕ ಶೀರ್ಷಿಕೆ "2014-00-105-0-01" ಅಡಿಯಲ್ಲಿ ಭರಿಸುವುದು.

3. ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 241 ವೆಚ್ಚ-10/2022 (e), ದಿನಾಂಕ:05.09.2022 ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

**ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ**
**ಮತ್ತು ಅವರ ಹೆಸರಿನಲ್ಲಿ,**

**(ಆರ್. ವಿಜಯಕುಮಾರಿ)**
**ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ-1),**
**ಕಾನೂನು ಇಲಾಖೆ.**

**ಇವರಿಗೆ:**

1. ಪ್ರಧಾನ ಮಹಾಲೇಖಪಾಲರು (ಎ. ಮತ್ತು ಇ.) / (ಲೆಕ್ಕಪರಿಶೋಧನೆ-1) / (ಲೆಕ್ಕಪರಿಶೋಧನೆ-2), ಕರ್ನಾಟಕ, ಬೆಂಗಳೂರು.
2. ರಿಜಿಸ್ಟ್ರಾರ್ ಜನರಲ್‌ರವರು, ಕರ್ನಾಟಕ ಉಚ್ಚ ನ್ಯಾಯಾಲಯ, ಬೆಂಗಳೂರು-1

3. ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ರಾಯಚೂರು
4. ಮಾನ್ಯ ಮುಖ್ಯಮಂತ್ರಿಯವರ ಪ್ರಧಾನ ಕಾರ್ಯದರ್ಶಿಯವರು, ವಿಧಾನ ಸೌಧ, ಬೆಂಗಳೂರು-1
5. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ, ಕಾವೇರಿ ಭವನ, ಕೆಂಪೇಗೌಡ ರಸ್ತೆ, ಬೆಂಗಳೂರು-560009
6. ಮಾನ್ಯ ಕಾನೂನು, ಸಂಸದೀಯ ವ್ಯವಹಾರಗಳು ಮತ್ತು ಸಣ್ಣ ನೀರಾವರಿ ಸಚಿವರ ಆಪ್ತ ಕಾರ್ಯದರ್ಶಿಯವರು, ವಿಧಾನ ಸೌಧ, ಬೆಂಗಳೂರು-1
7. ಸರ್ಕಾರದ ಜಂಟಿ ಕಾರ್ಯದರ್ಶಿಯವರು, (ಆಡಳಿತ-1), ಕಾನೂನು ಇಲಾಖೆ, ವಿಧಾನ ಸೌಧ, ಬೆಂಗಳೂರು-1
8. ಸರ್ಕಾರದ ಮುಖ್ಯ ಕಾರ್ಯದರ್ಶಿಯವರ ಆಪ್ತ ಕಾರ್ಯದರ್ಶಿಯವರು, ವಿಧಾನ ಸೌಧ, ಬೆಂಗಳೂರು-1
9. ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಯವರ ಆಪ್ತಕಾರ್ಯದರ್ಶಿಯವರು, ಒಳಾಡಳಿತ ಇಲಾಖೆ, ವಿಧಾನ ಸೌಧ, ಬೆಂಗಳೂರು
10. ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಯವರ ಆಪ್ತಕಾರ್ಯದರ್ಶಿಯವರು, ಲೋಕೋಪಯೋಗಿ ಇಲಾಖೆ, ವಿಕಾಸ ಸೌಧ, ಬೆಂಗಳೂರು
11. ಸರ್ಕಾರದ ಪ್ರಧಾನ ಕಾರ್ಯದರ್ಶಿಯವರ ಆಪ್ತ ಕಾರ್ಯದರ್ಶಿಯವರು, ಕಾನೂನು ಇಲಾಖೆ, ವಿಧಾನ ಸೌಧ, ಬೆಂಗಳೂರು-1
12. ಸರ್ಕಾರದ ಅಧೀನ ಕಾರ್ಯದರ್ಶಿಯವರು, ಆರ್ಥಿಕ ಇಲಾಖೆ (ವೆಚ್ಚ-2 ಮತ್ತು 10), ವಿಧಾನ ಸೌಧ, ಬೆಂಗಳೂರು-1
13. ಶಾಖಾ ರಕ್ಷಾ ಕಡತ / ಹೆಚ್ಚುವರಿ ಪ್ರತಿಗಳು.

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 331

ವಿಧಾನ ಸಭಾ ಸದಸ್ಯರ ಹೆಸರು : ಶ್ರೀ ಬೆಳ್ಳಿಪ್ರಕಾಶ್

ಉತ್ತರಿಸುವ ದಿನಾಂಕ : 13-09-2022

ಉತ್ತರಿಸುವ ಸಚಿವರು : ಗೃಹ ಸಚಿವರು

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಕಡೂರು ವಿಧಾನಸಭಾ ಕ್ಷೇತ್ರದ ವ್ಯಾಪ್ತಿಯ ಪಂಚನಹಳ್ಳಿಯಲ್ಲಿ ಅಗ್ನಿಶಾಮಕ ಠಾಣೆ ಇಲ್ಲದಿರುವುದರಿಂದ ಅನೇಕ ಬೆಂಕಿ ಅವಘಡಗಳು ಹಾಗೂ ಇತರೇ ದುರಂತಗಳು ಸಂಭವಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ |
| ಆ) | ಹಾಗಿದ್ದಲ್ಲಿ, ಕಳೆದ ಮೂರು ವರ್ಷಗಳಿಂದ ಪಂಚನಹಳ್ಳಿ ಮತ್ತು ಸಿಂಗಟಗೆರೆ ಹೋಬಳಿಯಲ್ಲಿ ಸಂಭವಿಸಿರುವ ಬೆಂಕಿ ಅನಾಹುತಗಳು ಹಾಗೂ ಇನ್ನಿತರೆ ದುರಂತಗಳು ಎಷ್ಟು; ಈ ಅನಾಹುತಗಳಿಂದ ಎಷ್ಟು ಜೀವಹಾನಿ ಮತ್ತು ಆಸ್ತಿಪಾಸ್ತಿ ಹಾಳಾಗಿದೆ; (ಮಾಹಿತಿ ನೀಡುವುದು) | ಪಂಚನಹಳ್ಳಿ ಹಾಗೂ ಸಿಂಗಟಗೆರೆ ಹೋಬಳಿಗಳು ಕಡೂರು ಅಗ್ನಿಶಾಮಕ ಠಾಣೆಯಿಂದ 42 ಕಿ.ಮೀ, ಹೊಸದುರ್ಗ ಅಗ್ನಿಶಾಮಕ ಠಾಣೆಯಿಂದ 34 ಕಿ.ಮೀ ಮತ್ತು ಅರಸೀಕೆರೆ ಅಗ್ನಿಶಾಮಕ ಠಾಣೆಯಿಂದ 38 ಕಿ.ಮೀ ದೂರದಲ್ಲಿರುತ್ತವೆ.<br>ಕಳೆದ ಮೂರು ವರ್ಷಗಳಲ್ಲಿ ಅಂದರೆ 2020 ರಿಂದ ಇದುವರೆವಿಗೂ ಪಂಚನಹಳ್ಳಿ ಮತ್ತು ಸಿಂಗಟಗೆರೆ ಹೋಬಳಿಯಲ್ಲಿ ಸಂಭವಿಸಿರುವ ಅಗ್ನಿಕರೆ ಮತ್ತು ರಕ್ಷಣಾ ಕರೆಗಳ ವಿವರಗಳು ಈ ಕೆಳಕಂಡಂತಿದೆ.<br>ಬೆಂಕಿ ಅನಾಹುತಗಳು : 23<br>ಇನ್ನಿತರೆ ದುರಂತಗಳು : ಇರುವುದಿಲ್ಲ<br>ಜೀವಹಾನಿ : ಇರುವುದಿಲ್ಲ<br>ಆಸ್ತಿ ಪಾಸ್ತಿ ನಷ್ಟ : ರೂ.11,41,000/- |
| ಇ) | ಅಗ್ನಿಶಾಮಕ ಠಾಣೆಗಳು ದೂರದಲ್ಲಿರುವುದರಿಂದ ಸಮರ್ಪಕ ಮತ್ತು ಸಮಯೋಚಿತ ಸೇವೆಯನ್ನು ಉಪಯೋಗಿಸಿ ಕೊಳ್ಳುವುದು ಕಷ್ಟಸಾಧ್ಯವಾಗುತ್ತಿರುವುದರಿಂದ ಪಂಚನಹಳ್ಳಿಗೆ ಹೊಸ ಅಗ್ನಿಶಾಮಕ ಠಾಣೆಯನ್ನು ಮಂಜೂರು ಮಾಡುವ ಕುರಿತು ಸರ್ಕಾರ ಪರಿಶೀಲನೆ ನಡೆಸಿದೆಯೇ; ಹಾಗಿದ್ದಲ್ಲಿ, ಯಾವ ಹಂತದಲ್ಲಿದೆ; ಪ್ರಸ್ತುಕ ಸಾಲಿನಲ್ಲಿ ಮಂಜೂರು ಮಡಲಾಗುವುದೇ; | ಪಂಚನಹಳ್ಳಿ ಹಾಗೂ ಸಿಂಗಟಗೆರೆ ಹೋಬಳಿಗಳಿಗೆ ಹತ್ತಿರವಿರುವ ಕಡೂರು ಅಗ್ನಿಶಾಮಕ ಠಾಣೆ 42 ಕಿ.ಮೀ, ಹೊಸದುರ್ಗ ಅಗ್ನಿಶಾಮಕ ಠಾಣೆ 34 ಕಿ.ಮೀ ಹಾಗೂ ಅರಸೀಕೆರೆ ಅಗ್ನಿಶಾಮಕ ಠಾಣೆ 38 ಕಿ.ಮೀ ದೂರದಲ್ಲಿರುತ್ತವೆ ಸದರಿ ಅಗ್ನಿಶಾಮಕ ಠಾಣೆಗಳಿಂದ ಕಾರ್ಯ ನಿರ್ವಹಿಸುತ್ತಿದ್ದು, ಸಮರ್ಥವಾಗಿ ಅಗ್ನಿ ಅನಾಹುತಗಳನ್ನು ನಂದಿಸುವ ಕಾರ್ಯ ನಿರ್ವಹಿಸುತ್ತಿವೆ. |
| ಈ) | ಸರ್ಕಾರದ ಪಂಚನಹಳ್ಳಿಗೆ ಅಗ್ನಿಶಾಮಕ ಠಾಣೆಯನ್ನು ಮಂಜೂರು ಮಾಡದಿರಲು ಕಾರಣಗಳೇನು; ಈ ಕುರಿತು ಸರ್ಕಾರದ ನಿಲುವೇನು? (ಮಾಹಿತಿ ನೀಡುವುದು) | ಮುಂದುವರೆದು, ಪಂಚನಹಳ್ಳಿ ಹೋಬಳಿ ಅಗ್ನಿಶಾಮಕ ಠಾಣೆಯನ್ನು ಸ್ಥಾಪಿಸಲು ಜಿಲ್ಲಾಧಿಕಾರಿ, ಚಿಕ್ಕಮಗಳೂರು ಇವರು 2.00 ಎಕರೆ ಜಮೀನನ್ನು ಮಂಜೂರು ಮಾಡಿದ್ದು, ಪ್ರಸ್ತುತ ತಾಲ್ಲೂಕು ಮಟ್ಟದಲ್ಲಿ ಅಗ್ನಿಶಾಮಕ ಠಾಣೆಗಳನ್ನು ಪ್ರಾರಂಭಿಸಲು ಕ್ರಮಕೈಗೊಳ್ಳಲಾಗುತ್ತಿದ್ದು, ಮುಂದಿನ ದಿನಗಳಲ್ಲಿ ಜನಸಂಖ್ಯೆ, ಕೈಗಾರಿಕಾ ಬೆಳವಣಿಗೆ, ಕಟ್ಟಡಗಳ ಸಂಖ್ಯೆ ಹಾಗೂ ಅಗ್ನಿ ಅನಾಹುತಗಳು, ರಕ್ಷಣಾ ಕರೆಗಳ ಆಧಾರದ ಮೇರೆಗೆ ಹೋಬಳಿ ಮಟ್ಟದಲ್ಲಿ ಅಗ್ನಿಶಾಮಕ ಠಾಣೆಯನ್ನು ಸ್ಥಾಪಿಸಲು ಪರಿಶೀಲಿಸಲಾಗುವುದು. |

ಸಂಖ್ಯೆ: ಹೆಚ್‌ಡಿ 233 ಎಸ್‌ಎಫ್‌ಬಿ 2022

(ಆರಗ ಜ್ಞಾನೇಂದ್ರ)
ಗೃಹ ಸಚಿವರು

**ಮಾನ್ಯ ವಿಧಾನ ಸಭೆಯ ಸದಸ್ಯರಾದ ಶ್ರೀ ಬೆಳ್ಳಿಪ್ರಕಾಶ್ (ಕಡೂರು) ಇವರ ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ: 331 ಕ್ಕೆ ಪೂರಕ ಟಿಪ್ಪಣಿ.**

ಚಿಕ್ಕಮಗಳೂರು ಜಿಲ್ಲೆಯ ಕಡೂರು ತಾಲ್ಲೂಕಿನ ಪಂಚನಹಳ್ಳಿ ಹಾಗೂ ಸಿಂಗಟಗೆರೆ ಹೋಬಳಿಗಳಲ್ಲಿ ಅನೇಕ ಬೆಂಕಿ ಅವಘಡಗಳು ಹಾಗೂ ಇತರೆ ದುರಂತಗಳು ಸಂಭವಿಸಿದಾಗ ಹತ್ತಿರದಲ್ಲಿರುವ ಕಡೂರು ಅಗ್ನಿಶಾಮಕ ಠಾಣೆಯಿಂದ 42 ಕಿ.ಮೀ, ಹೊಸದುರ್ಗ ಅಗ್ನಿಶಾಮಕ ಠಾಣೆಯಿಂದ 34 ಕಿ.ಮೀ. ಹಾಗೂ ಅರಸೀಕೆರೆ ಅಗ್ನಿಶಾಮಕ ಠಾಣೆಯಿಂದ 38 ಕಿ.ಮೀ ಅಂತರದಲ್ಲಿರುವ ಅಗ್ನಿಶಾಮಕ ಠಾಣೆಗಳಿಂದ ಬೆಂಕಿಯನ್ನು ನಂದಿಸಲಾಗುತ್ತಿದೆ. 2020ನೇ ಸಾಲಿನಿಂದ ದಿನಾಂಕ: 06-09-2022ವರೆಗೆ ಒಟ್ಟು 23 ಅಗ್ನಿ ಅವಘಡಗಳು ಸಂಭವಿಸಿದ್ದು, ಯಾವುದೇ ಜೀವಹಾನಿ ಸಂಭವಿಸಿರುವುದಿಲ್ಲ. ಇದರಿಂದಾಗಿ ಒಟ್ಟು ರೂ.11,41,000/-ಗಳ ಮೊತ್ತದ ಆಸ್ತಿ-ಪಾಸ್ತಿಗೆ ನಷ್ಟವುಂಟಾಗಿರುತ್ತದೆ.

ಜಿಲ್ಲಾಧಿಕಾರಿ, ಚಿಕ್ಕಮಗಳೂರು ಇವರು ಕಡೂರು ತಾಲ್ಲೂಕಿನ ಪಂಚನಹಳ್ಳಿ ಹೋಬಳಿಯ ತಿಮ್ಮಾಪುರ ಗ್ರಾಮದ ಸ.ನಂ. 22/ಪಿ2ರಲ್ಲಿ 2.00 ಎಕರೆ ಸರ್ಕಾರಿ ಜಮೀನನ್ನು ಅಗ್ನಿಶಾಮಕ ಠಾಣೆ ಹಾಗೂ ಅಧಿಕಾರಿ/ಸಿಬ್ಬಂದಿಗಳ ವಸತಿಗೃಹಗಳ ಕಟ್ಟಡಗಳ ನಿರ್ಮಾಣಕ್ಕೆ ಕಾಯ್ದಿರಿಸಲಾಗಿದೆ.

ಮುಂದುವರೆದು, ಸ್ಟ್ಯಾಂಡಿಗ್ ಫೈರ್, ಅಡ್ವೈಸರಿ ಸಮಿತಿಯ ಅನ್ವಯ ಅಗ್ನಿಶಾಮಕ ಠಾಣೆಯ ಸ್ಥಾಪನೆಗೆ ಮುಖ್ಯವಾಗಿ ಜನಸಂಖ್ಯೆ, ಪ್ರತಿಕ್ರಿಯೆ ಸಮಯ ಮತ್ತು ಅಪಾಯದ ವಿಶ್ಲೇಷಣೆಯನ್ನು ಆಧರಿಸಿ, ಅಪಾಯದ ವಿಶ್ಲೇಷಣೆಯ ಅನುಪಸ್ಥಿತಿಯಲ್ಲಿ ನಿರ್ದಿಷ್ಟವಾದ ಸಲಕರಣೆ ಅವಶ್ಯಕತೆ, ಟ್ರಾಫಿಕ ದಟ್ಟಣೆಯ ಜೊತೆಗೆ ಜನಸಂಖ್ಯೆ ಮತ್ತು ಪ್ರದೇಶವನ್ನು ಆಧಾರಿಸಿ, ಅಗ್ನಿಶಾಮಕ ಠಾಣೆ, ಮತ್ತು ಅಗ್ನಿಶಮನ, ಉಪಕರಣಗಳ ಅಗತ್ಯತೆಯನ್ನು ನಿರ್ದಿಷ್ಟಪಡಿಸಲಾಗಿದೆ.

1. ನಗರ ವ್ಯಾಪ್ತಿಯ ಪ್ರತಿ 10 ಚ.ಕಿ.ಮೀ ಗೆ 01 ಅಗ್ನಿಶಾಮಕ ಠಾಣೆ ಇರಬೇಕಾಗಿರುತ್ತದೆ.
2. ಗ್ರಾಮೀಣ ಪ್ರದೇಶದ ವ್ಯಾಪ್ತಿಯ ಪ್ರತಿ 50 ಚ.ಕಿ.ಮೀ ಗೆ 01 ಅಗ್ನಿಶಾಮಕ ಠಾಣೆ ಇರಬೇಕು.
3. ಪ್ರತಿ 50,000 ಜನಸಂಖ್ಯೆಗೆ 01 ಜಲವಾಹನ ಹೊಂದಿರಬೇಕು.

-----------------00-----------------

# ಕರ್ನಾಟಕ ವಿಧಾನ ಸಭೆ

1] ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 332

2] ಮಾನ್ಯ ಸದಸ್ಯರ ಹೆಸರು : ಶ್ರೀ ಬೆಳ್ಳಿಪ್ರಕಾಶ್ (ಕಡೂರು)

3] ಉತ್ತರಿಸುವ ದಿನಾಂಕ : 13/09/2022

4] ಉತ್ತರಿಸುವ ಸಚಿವರು : ಗೃಹ ಸಚಿವರು

<table>
<tr><th>ಕ್ರ.ಸಂ.</th><th>ಪ್ರಶ್ನೆ</th><th>ಉತ್ತರ</th></tr>
<tr><td>ಅ)</td><td>ಕಡೂರು ವಿಧಾನಸಭಾ ಕ್ಷೇತ್ರ ವ್ಯಾಪ್ತಿಯಲ್ಲಿ ಸಂಚಾರಿ ಪೊಲೀಸ್ ಠಾಣೆ ಇಲ್ಲದಿರುವುದರಿಂದ ಕಡೂರು ಮತ್ತು ಬೀರೂರು ಪಟ್ಟಣಗಳ ವ್ಯಾಪ್ತಿಯಲ್ಲಿ ರಾಷ್ಟ್ರೀಯ ಹೆದ್ದಾರಿಗಳು ಹಾದುಹೋಗಿದ್ದು ಅಪಘಾತಗಳು ಹಾಗೂ ಇನ್ನಿತರೆ ದುರಂತಗಳು ಸಂಭವಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ;</td><td>ಹೌದು</td></tr>
<tr><td>ಆ)</td><td>ಹಾಗಿದ್ದಲ್ಲಿ, ಕಳೆದ ಮೂರು ವರ್ಷಗಳಿಂದ ಇಲ್ಲಿಯವರೆಗೆ ಕಡೂರು ಮತ್ತು ಬೀರೂರು ಪೊಲೀಸ್ ಠಾಣಾ ವ್ಯಾಪ್ತಿಯಲ್ಲಿ ಸಂಭವಿಸಿರುವ ಅಪಘಾತಗಳು ಹಾಗೂ ಇನ್ನಿತರೆ ದುರಂತಗಳು ಎಷ್ಟು; ಈ ಅಪಘಾತಗಳಿಂದ ಎಷ್ಟು ಪ್ರಾಣ ಹಾನಿಯಾಗಿದೆ; (ಮಾಹಿತಿ ನೀಡುವುದು).</td><td>
<table>
<tr><th>ಪೊಲೀಸ್ ಠಾಣೆಯ ಹೆಸರು</th><th>ವರ್ಷ</th><th>ಮಾರಣಾಂತಿಕವಾದ</th><th>ಮಾರಣಾಂತಿಕವಲ್ಲದ</th><th>ಒಟ್ಟು</th><th>ಮರಣ ಗೊಂಡ</th><th>ಗಾಯ ಗೊಂಡ</th></tr>
<tr><td>ಕಡೂರು</td><td>2019</td><td>20</td><td>60</td><td>80</td><td>20</td><td>122</td></tr>
<tr><td></td><td>2020</td><td>22</td><td>49</td><td>71</td><td>22</td><td>100</td></tr>
<tr><td></td><td>2021</td><td>27</td><td>59</td><td>86</td><td>27</td><td>88</td></tr>
<tr><td></td><td>2022 (07.09.2022)</td><td>17</td><td>56</td><td>73</td><td>17</td><td>73</td></tr>
<tr><td>ಬೀರೂರು</td><td>2019</td><td>18</td><td>41</td><td>59</td><td>19</td><td>73</td></tr>
<tr><td></td><td>2020</td><td>20</td><td>34</td><td>54</td><td>22</td><td>51</td></tr>
<tr><td></td><td>2021</td><td>17</td><td>47</td><td>64</td><td>17</td><td>59</td></tr>
<tr><td></td><td>2022 (07.09.2022)</td><td>14</td><td>32</td><td>46</td><td>14</td><td>52</td></tr>
</table>
</td></tr>
<tr><td>ಇ)</td><td>ಹೊಸ ಸಂಚಾರಿ ಪೊಲೀಸ್ ಠಾಣೆ ತೆರೆಯಲು ರಾಷ್ಟ್ರೀಯ ಪೊಲೀಸ್ ಆಯೋಗವು ನಿಗಧಿಪಡಿಸಿರುವ ಮಾನದಂಡಗಳೇನು; (ಮಾಹಿತಿ ನೀಡುವುದು).</td><td>ರಾಷ್ಟ್ರೀಯ ಪೊಲೀಸ್ ಆಯೋಗದ ಮಾನದಂಡಗಳನ್ವಯ ಸಂಚಾರ ಪೊಲೀಸ್ ಠಾಣೆ ಸೃಜನೆಗೆ, ಸಂಚಾರ ಪೊಲೀಸ್ ಠಾಣೆಯ ವ್ಯಾಪ್ತಿಯಲ್ಲಿ ವಾರ್ಷಿಕ 150 ರಿಂದ 250 ಅಪಘಾತ ಪ್ರಕರಣಗಳು ದಾಖಲಾಗಿರಬೇಕು.</td></tr>
<tr><td>ಈ)</td><td>ಕಡೂರು–ಬೀರೂರು ಪಟ್ಟಣವನ್ನೊಳಗೊಂಡಂತೆ ಹೊಸ ಸಂಚಾರಿ ಪೊಲೀಸ್ ಠಾಣೆಯನ್ನು ಮಂಜೂರು ಮಾಡುವ ಕುರಿತು ಈಗಾಗಲೇ ಪ್ರಸ್ತಾವನೆ ಸಲ್ಲಿಸಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೆ;</td><td rowspan="2">ಚಿಕ್ಕಮಗಳೂರು ಜಿಲ್ಲೆಯ ತರೀಕೆರೆಯಲ್ಲಿ ಕಡೂರು ಮತ್ತು ಬೀರೂರು ವೃತ್ತ ಕಛೇರಿಗಳ ವ್ಯಾಪ್ತಿ ಒಳಗೊಂಡಂತೆ ಸಂಚಾರಿ ಪೊಲೀಸ್ ಠಾಣೆ ಸೃಜಿಸುವ ಪ್ರಸ್ತಾವನೆಯು ರಾಷ್ಟ್ರೀಯ ಪೊಲೀಸ್ ಆಯೋಗ ನಿಗದಿಪಡಿಸಿರುವ ಮಾನದಂಡಗಳನ್ನು ಪೂರೈಸದಿರುವ ಕಾರಣ ಪ್ರಸ್ತಾವನೆಯನ್ನು ಪರಿಗಣಿಸಿರುವುದಿಲ್ಲ.<br><br>ಪ್ರಸ್ತಾವನೆಯು ಮಾನದಂಡಗಳನ್ನು ಪೂರೈಸಿದ್ದಲ್ಲಿ, ನಿಯಮಾನುಸಾರ ಪರಿಶೀಲಿಸಲಾಗುವುದು.</td></tr>
<tr><td>ಉ)</td><td>ಹಾಗಿದ್ದಲ್ಲಿ, ಸಲ್ಲಿಸಿರುವ ಪ್ರಸ್ತಾವನೆಯು ಯಾವ ಹಂತದಲ್ಲಿದೆ; ಪ್ರಸಕ್ತ ಸಾಲಿನಲ್ಲಿ ಕಡೂರು ಪಟ್ಟಣಕ್ಕೆ ಹೊಸ ಸಂಚಾರಿ ಪೊಲೀಸ್ ಠಾಣೆಯನ್ನು ಸ್ಥಾಪಿಸಲು ಸರ್ಕಾರ ಕ್ರಮವಹಿಸುವುದೇ; ಈ ಕುರಿತು ಸರ್ಕಾರದ ನಿಲುವೇನು?</td></tr>
</table>

**ಸಂಖ್ಯೆ: ಹೆಚ್‌ಡಿ 129 ಪಿಓಪಿ 2022**

(ಆರಗ ಜ್ಞಾನೇಂದ್ರ)
ಗೃಹ ಸಚಿವರು.

## ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 333

ಉತ್ತರಿಸಬೇಕಾದ ದಿನಾಂಕ : 13-09-2022

ಸದಸ್ಯರ ಹೆಸರು : ಶ್ರೀ ಬೆಳ್ಳಿಪ್ರಕಾಶ್ (ಕಡೂರು)

ಉತ್ತರಿಸುವವರು : ಮುಖ್ಯಮಂತ್ರಿಗಳು

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ರಾಜ್ಯದಲ್ಲಿ ವಿವಿಧ ಇಲಾಖೆಗಳಲ್ಲಿ ನೇಮಕಾತಿ ಹೊಂದಿ ಕರ್ತವ್ಯ ನಿರ್ವಹಿಸುತ್ತಿರುವ ಅಧಿಕಾರಿ ಮತ್ತು ಸಿಬ್ಬಂದಿಗಳಿಗೆ ಕಡ್ಡಾಯವಾಗಿ ವೃತ್ತಿ ಬುನಾದಿ ಹಾಗೂ ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆಯ ವ್ಯಾಪ್ತಿಗೊಳಪಡುವ ಸಂಸ್ಥೆ ಮತ್ತು ಸಂಬಂಧಿಸಿದ ಇಲಾಖೆಗಳಿಂದ ನೀಡಲಾಗುವ ತರಬೇತಿಗಳನ್ನು ಪಡೆಯುವುದು ಅನಿವಾರ್ಯವೇ; ಹಾಗಿದ್ದಲ್ಲಿ, ಯಾವ ಹುದ್ದೆಗಳಿಗೆ ವೃತ್ತಿ ಬುನಾದಿ ಹಾಗೂ ಇನ್ನಿತರೆ ತರಬೇತಿಗಳು ಅನಿವಾರ್ಯವಾಗಿವೆ; (ಸಂಪೂರ್ಣ ಮಾಹಿತಿ ನೀಡುವುದು) | ರಾಜ್ಯದಲ್ಲಿ ವಿವಿಧ ಇಲಾಖೆಗಳಲ್ಲಿ ನೇಮಕಾತಿ ಹೊಂದಿ ಕರ್ತವ್ಯ ನಿರ್ವಹಿಸುತ್ತಿರುವ ಅಧಿಕಾರಿ ಮತ್ತು ಸಿಬ್ಬಂದಿಗಳಿಗೆ ಕಡ್ಡಾಯವಾಗಿ ವೃತ್ತಿ ಬುನಾದಿ ಹಾಗೂ ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆಯ ವ್ಯಾಪ್ತಿಗೊಳಪಡುವ ಸಂಸ್ಥೆ ಮತ್ತು ಸಂಬಂಧಿಸಿದ ಇಲಾಖೆಗಳಿಂದ ನೀಡಲಾಗುವ ತರಬೇತಿಗಳನ್ನು ಪಡೆಯುವುದು ಅನಿವಾರ್ಯವಾಗಿರುತ್ತದೆ.<br><br>ಎ, ಬಿ, ಸಿ ಮತ್ತು ಡಿ ವರ್ಗದ ಎಲ್ಲಾ ಅಧಿಕಾರಿ / ನೌಕರರಿಗೆ ವೃತ್ತಿ ಬುನಾದಿ ಹಾಗೂ ಇನ್ನಿತರೆ ತರಬೇತಿ ಪಡೆಯುವುದು ಅನಿವಾರ್ಯವಾಗಿರುತ್ತದೆ. |
| ಆ | ಆಡಳಿತ/ಜಿಲ್ಲಾ ತರಬೇತಿ ಸಂಸ್ಥೆಗಳು ಮತ್ತು ಇಲಾಖೆಗಳು ನೀಡಲಾಗುವ ವೃತ್ತಿ ಬುನಾದಿ ಹಾಗೂ ಇತರ ತರಬೇತಿಗಳ ಉದ್ದೇಶ ಮತ್ತು ಮಹತ್ವಗಳೇನು; (ತರಬೇತಿವಾರು ಪೂರ್ಣ ಮಾಹಿತಿ ನೀಡುವುದು) | ಅಧಿಕಾರಿ / ಸಿಬ್ಬಂದಿ ವರ್ಗದವರಿಗೆ ಸರ್ಕಾರದ ಕಾನೂನು, ನೀತಿ - ನಿಯಮಗಳು, ಯೋಜನೆಗಳು, ಕೌಶಲ್ಯತೆ, ಕರ್ತವ್ಯ ಮತ್ತು ಜವಾಬ್ದಾರಿಗಳ ಬಗ್ಗೆ ಅರಿವು, ದೈನಂದಿನ ಕಛೇರಿ ನಿರ್ವಹಣೆ, ಸಾರ್ವಜನಿಕರೊಂದಿಗೆ ಸ್ಪಂದನೆ, ನಾಯಕತ್ವ ಗುಣ ಗುರುತಿಸಿ ಬೆಳೆಸುವುದು, ಕಛೇರಿ ವಾತಾವರಣವನ್ನು ಸುಮಧುರವಾಗಿ ಇಟ್ಟುಕೊಳ್ಳುವುದನ್ನು ಪ್ರೋತ್ಸಾಯಿಸುವುದು ತರಬೇತಿಯ ಉದ್ದೇಶ ಮತ್ತು ಮಹತ್ವವಾಗಿದೆ. |
| ಇ | ಕಳೆದ ಮೂರು ವರ್ಷಗಳಲ್ಲಿ ಆಡಳಿತ/ಜಿಲ್ಲಾ ತರಬೇತಿ ಸಂಸ್ಥೆಗಳು ಆಯೋಜಿಸಲಾಗಿರುವ ತರಬೇತಿಗಳ ಸಂಪೂರ್ಣ ಮಾಹಿತಿ ನೀಡುವುದು; | ಆಡಳಿತ ತರಬೇತಿ ಸಂಸ್ಥೆಯಲ್ಲಿ ಕಳೆದ ಮೂರು ವರ್ಷಗಳಲ್ಲಿ ನಡೆಸಲಾದ ತರಬೇತಿಯ ಮಾಹಿತಿಯ ವಿವರ ಈ ಕೆಳಗಿನಂತಿದೆ. |

| ಕ್ರ. ಸಂ. | ವರ್ಷ | ಆಡಳಿತ ತರಬೇತಿ ಸಂಸ್ಥೆ | ತರಬೇತಿ ಪಡೆದ ಅಧಿಕಾರಿಗಳ ಸಂಖ್ಯೆ |
|---|---|---|---|
| 1 | 2019-20 | 552 | 14195 |
| 2 | 2020-21 | 871 | 29284 |
| 3 | 2021-22 | 470 | 19279 |

| | | |
|---|---|---|
| | | ಜಿಲ್ಲಾ ತರಬೇತಿ ಸಂಸ್ಥೆಗಳಲ್ಲಿ ಕಳೆದ ಮೂರು ಸಾಲಿನಲ್ಲಿ ನಡೆಸಿದ ತರಬೇತಿ ಕಾರ್ಯಕ್ರಮಗಳು ಮತ್ತು ತರಬೇತಿಗೆ ಹಾಜರಾದ ಪ್ರತಿಕ್ಷಣಾರ್ಥಿಗಳ ಸಂಖ್ಯೆಗಳ ವಿವರಗಳನ್ನು **ಅನುಬಂಧ-1** ರಲ್ಲಿ ನೀಡಲಾಗಿದೆ. |
| ಈ | ಹಾಗಿದ್ದಲ್ಲಿ, ಸಮಯೋಚಿತವಾಗಿ ತರಬೇತಿ ಪಡೆಯದ ಅಧಿಕಾರಿಗಳು ಮತ್ತು ಸಿಬ್ಬಂದಿಗಳಿಂದ ಸಾರ್ವಜನಿಕರು ಸಮರ್ಪಕವಾದ ಸರ್ಕಾರಿ ಸೇವೆಗಳನ್ನು ಪಡೆಯುವಲ್ಲಿ ವಂಚಿತ ರಾಗುತ್ತಿರುವುದನ್ನು ಸರ್ಕಾರ ಗಂಭೀರವಾಗಿ ಪರಿಗಣಿಸಿದೆಯೇ: | ಹೌದು |
| ಉ | ಹಾಗಿದ್ದಲ್ಲಿ, ಈ ಸಮಸ್ಯೆಗಳನ್ನು ಬಗೆಹರಿಸಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು? | ಎಲ್ಲಾ ವರ್ಗದ ಅಧಿಕಾರಿ / ನೌಕರರಿಗೆ ಸಾಮಾನ್ಯ ಬುನಾದಿ ತರಬೇತಿ / ವೃತ್ತಿ ಬುನಾದಿ ತರಬೇತಿಗಳನ್ನು ನೀಡುವುದನ್ನು ಕಡ್ಡಾಯಗೊಳಿಸಿದೆ. |

ಸಂಖ್ಯೆ: ಸಿಆಸುಇ (ಆಸು) 107 ಇಆಸು 2022

(ಬಸವರಾಜ ಬೊಮ್ಮಾಯಿ)
ಮುಖ್ಯಮಂತ್ರಿ

**ಮಾನ್ಯ ವಿಧಾನ ಸಭೆಯ ಸದಸ್ಯರಾದ ಶ್ರೀ ಬೆಳ್ಳಿಪ್ರಕಾಶ್ (ಕಡೂರು) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 333ಗೆ ಸಂಬಂಧಿಸಿದ ಅನುಬಂಧ**

ಜಿಲ್ಲಾ ತರಬೇತಿ ಸಂಸ್ಥೆಗಳಲ್ಲಿ ಕಳೆದ ಮೂರು ಸಾಲಿನಲ್ಲಿ ನಡೆಸಿದ ತರಬೇತಿ ಕಾರ್ಯಕ್ರಮಗಳು ಮತ್ತು ತರಬೇತಿಗೆ ಹಾಜರಾದ ಪ್ರಶಿಕ್ಷಣಾರ್ಥಿಗಳ ಸಂಖ್ಯೆಗಳ ವಿವರ

## ಅನುಬಂಧ-1

| ಕ್ರ ಸಂ | ಜಿತಸಂ ಹೆಸರು | 2019-20 ಸಾಲಿನಲ್ಲಿ | | 2020-21 ನೇ ಸಾಲಿನಲ್ಲಿ | | 2021-22ನೇ ಸಾಲಿನಲ್ಲಿ | |
|---|---|---|---|---|---|---|---|
| | | ತರಬೇತಿಗಳ ಸಂಖ್ಯೆ | ಪ್ರಶಿಕ್ಷಣಾರ್ಥಿಗಳ ಸಂಖ್ಯೆ | ತರಬೇತಿಗಳ ಸಂಖ್ಯೆ | ಪ್ರಶಿಕ್ಷಣಾರ್ಥಿಗಳ ಸಂಖ್ಯೆ | ತರಬೇತಿಗಳ ಸಂಖ್ಯೆ | ಪ್ರಶಿಕ್ಷಣಾರ್ಥಿಗಳಸಂಖ್ಯೆ |
| 1 | ಬಾಗಲಕೋಟೆ | 47 | 1764 | 68 | 4106 | 74 | 3456 |
| 2 | ರಾಯಚೂರು | 45 | 461 | 65 | 921 | 65 | 1396 |
| 3 | ಬಳ್ಳಾರಿ | 43 | 739 | 33 | 620 | 46 | 1149 |
| 4 | ದಾವಣಗೆರೆ | 53 | 2079 | 45 | 1825 | 57 | 3047 |
| 5 | ಚಿತ್ರದುರ್ಗ | 41 | 1339 | 45 | 1578 | 55 | 2424 |
| 6 | ಕೊಪ್ಪಳ | 50 | 1187 | 39 | 1053 | 39 | 1053 |
| 7 | ಶಿವಮೊಗ್ಗ | 46 | 230 | 48 | 169 | 56 | 1609 |
| 8 | ಹಾಸನ | 93 | 2694 | 87 | 2523 | 61 | 2103 |
| 9 | ಮಡಿಕೇರಿ | 46 | 1011 | 65 | 1435 | 64 | 1279 |
| 10 | ಮಂಡ್ಯ | 53 | 1051 | 70 | 2795 | 64 | 3315 |
| 11 | ಚಾಮರಾಜನಗರ | 76 | 1621 | 51 | 1154 | 62 | 1757 |
| 12 | ಮೈಸೂರು | 98 | 2603 | 66 | 3048 | 69 | 2755 |
| 14 | ಕೋಲಾರ | 38 | 616 | 40 | 972 | 49 | 1194 |
| 15 | ಕಲಬುರ್ಗಿ | 119 | 4220 | 69 | 2441 | 69 | 2759 |
| 16 | ವಿಜಯಪುರ | 65 | 1678 | 55 | 2175 | 57 | 1491 |
| 17 | ಹಾವೇರಿ | 42 | 797 | 28 | 624 | 50 | 1532 |
| 18 | ಧಾರವಾಡ | 58 | 1200 | 36 | 1005 | 75 | 2250 |
| 19 | ಬೆಳಗಾವಿ | 45 | 922 | 42 | 1328 | 47 | 1468 |
| 20 | ಮಂಗಳೂರು | 44 | 866 | 21 | 567 | 12 | 504 |
| 21 | ಚಿಕ್ಕಮಗಳೂರು | 78 | 2085 | 41 | 971 | 58 | 1734 |
| 22 | ಚಿಕ್ಕಬಳ್ಳಾಪುರ | 12 | 261 | 18 | 369 | 21 | 499 |

| 23 | ರಾಮನಗರ | 43 | 733 | 45 | 1023 | 49 | 2236 |
|---|---|---|---|---|---|---|---|
| 24 | ಬೆಂಗಳೂರು (ನ) | 90 | 3116 | 75 | 1733 | 63 | 2418 |
| 25 | ಬೆಂಗಳೂರು (ಗ್ರಾ) | 46 | 1354 | 62 | 1291 | 51 | 1541 |
| 26 | ಗದಗ | 40 | 1131 | 42 | 1224 | 71 | 2118 |
| 27 | ಶಿರಸಿ | 20 | 723 | 21 | 1884 | 22 | 1425 |
| 28 | ಬೀದರ್ | 51 | 1689 | 42 | 1105 | 28 | 825 |
| 29 | ಯಾದಗಿರ್ | 48 | 1245 | 41 | 1004 | 52 | 1507 |

<u>ಕರ್ನಾಟಕ ವಿಧಾನ ಸಭೆ</u>

| | | |
|---|---|---|
| 1. ಚುಕ್ಕೆ ಗುರುತಿಲ್ಲದ ಪ್ರಶ್ನೆ | : | 335 |
| 2. ಸದಸ್ಯರ ಹೆಸರು | : | ಶ್ರೀ ಬೆಳ್ಳಿಪ್ರಕಾಶ್ |
| 3. ಉತ್ತರಿಸಬೇಕಾದ ದಿನಾಂಕ | : | 13-09-2022 |
| 4. ಉತ್ತರಿಸುವವರು | : | ಕಾನೂನು, ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಹಾಗೂ ಸಣ್ಣ ನೀರಾವರಿ ಸಚಿವರು |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| 1. | ಕಡೂರು ವಿಧಾನಸಭಾ ಕ್ಷೇತ್ರ ವ್ಯಾಪ್ತಿಯಲ್ಲಿ ಅಟಲ್ ಭೂಜಲ ಯೋಜನೆಯನ್ನು ಅನುಷ್ಠಾನಗೊಳಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ಹಾಗಿದ್ದಲ್ಲಿ, ಈ ಯೋಜನೆಯ ಉದ್ದೇಶ ಮತ್ತು ರೂಪುರೇಷೆಗಳೇನು. | ಹೌದು.<br><br>ಕರ್ನಾಟಕ ರಾಜ್ಯದ 14 ಜಿಲ್ಲೆಗಳ 41 ತಾಲ್ಲೂಕುಗಳಲ್ಲಿ ಅಂತರ್ಜಲ ತೀವ್ರ ಕೊರತೆಯಿರುವ 1199 ಗ್ರಾಮ ಪಂಚಾಯತಿಗಳಲ್ಲಿ ಅಟಲ್ ಭೂಜಲ್ ಯೋಜನೆಯನ್ನು ದಿನಾಂಕ 01/04/2020 ರಿಂದ ಅನುಷ್ಠಾನಗೊಳಿಸಲಾಗುತ್ತಿದೆ. ವಿವರವನ್ನು ಅನುಬಂಧ-1 ರಲ್ಲಿ ನೀಡಲಾಗಿದೆ.<br><br>ಸುಸ್ಥಿರ ಅಂತರ್ಜಲ ನಿರ್ವಹಣಾ ಪದ್ಧತಿಗಳ ಮೂಲಕ ಅಂತರ್ಜಲದ ತೀವ್ರ ಕೊರತೆ ಎದುರಿಸುತ್ತಿರುವ ಪ್ರದೇಶಗಳಲ್ಲಿ ಅಂತರ್ಜಲ ಸಂಪನ್ಮೂಲದ ನಿರ್ವಹಣೆಯನ್ನು ಸುಧಾರಿಸುವುದು ಅಟಲ್ ಭೂಜಲ ಯೋಜನೆಯ ಮುಖ್ಯ ಉದ್ದೇಶವಾಗಿದೆ.<br><br>**ಈ ಯೋಜನೆಯ ರೂಪುರೇಷಗಳು ಈ ಕೆಳಕಂಡಂತಿವೆ.**<br>• ವೈಜ್ಞಾನಿಕ ಮತ್ತು ಸುಸ್ಥಿರ ಅಂತರ್ಜಲ ನಿರ್ವಹಣೆಗಾಗಿ ರಾಜ್ಯದಲ್ಲಿ ಸಾಂಸ್ಥಿಕ ವ್ಯವಸ್ಥೆಯನ್ನು ಬಲಪಡಿಸುವುದು.<br>• ಕರ್ನಾಟಕ ರಾಜ್ಯದ 14 ಜಿಲ್ಲೆಗಳ 41 ತಾಲ್ಲೂಕುಗಳಲ್ಲಿ ಅಂತರ್ಜಲ ತೀವ್ರ ಕೊರತೆ ಎದುರಿಸುತ್ತಿರುವ 1199 ಗ್ರಾಮಪಂಚಾಯತಿಗಳಲ್ಲಿ ಸಮುದಾಯ ಸಹ ಭಾಗಿತ್ವದೊಂದಿಗೆ ಜಲ ಭದ್ರತಾ ಯೋಜನೆಗಳನ್ನು ತಯಾರಿಸಲಾಗುತ್ತಿದೆ. ಇಲ್ಲಿಯವರೆಗೆ ರಾಜ್ಯದ 41 ತಾಲ್ಲೂಕುಗಳಲ್ಲಿನ 1199 ಗ್ರಾಮಪಂಚಾಯತಿಗಳ ಜಲ ಭದ್ರತಾ ಯೋಜನೆಗಳನ್ನು ಸಿದ್ಧಪಡಿಸಿ, ಅಟಲ್ ಭೂಜಲ ಯೋಜನೆ, ರಾಷ್ಟ್ರ ಕಾರ್ಯಕ್ರಮ ನಿರ್ವಹಣಾ ಘಟಕ, ನವದೆಹಲಿ ರವರಿಗೆ ಸಲ್ಲಿಸಲಾಗಿದೆ. ಸದರಿ ಜಲ ಭದ್ರತಾ ಯೋಜನೆಗಳಲ್ಲಿ ಸಲ್ಲಿಸಲಾಗಿರುವ ಕ್ರಿಯಾ ಯೋಜನೆಯಂತೆ ಕಾಮಗಾರಿಗಳನ್ನು ಪಾಲುದಾರ ಇಲಾಖೆಗಳ ಮೂಲಕ ಅನುಷ್ಠಾನಗೊಳಿಸಲಾಗುವುದು.<br><br>• ಕೇಂದ್ರ/ರಾಜ್ಯ ಸರ್ಕಾರ ಯೋಜನೆಗಳ ಸಮನ್ವಯಗೊಳಿಸುವುದು. |

| 2. | ಈ ಕ್ಷೇತ್ರದಲ್ಲಿ ಈ ಯೋಜನೆಯ ಉದ್ದೇಶ ಹಾಗೂ ರೂಪು ರೇಷೆಗಳನ್ವಯ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸಲಾಗುತ್ತಿದೆಯೇ ಹಾಗಿದ್ದಲ್ಲಿ, ಈ ಯೋಜನೆಯನ್ನು ಯಾವ ರೀತಿ ಅನುಷ್ಠಾನ ಗೊಳಿಸಲಾಗುತ್ತಿದೆ (ಸಂಪೂರ್ಣ ಮಾಹಿತಿ ನೀಡುವುದು) | ಯೋಜನೆಯ ಉದ್ದೇಶದಂತೆ ಹಾಗೂ ರೂಪು ರೇಷೆಗಳನ್ವಯ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸಲಾಗುತ್ತಿದೆ.<br><br>ಈ ಯೋಜನೆಯನ್ನು ಅನುಷ್ಠಾನಗೊಳಿ ಸಲಾಗುತ್ತಿರುವ ಬಗ್ಗೆ ಈ ಕೆಳಕಂಡಂತೆ ಮಾಹಿತಿಯನ್ನು ಸಲ್ಲಿಸಲಾಗಿದೆ.<br><br>Dynamic Ground Water Report 2017 ರ ಪ್ರಕಾರ ಕರ್ನಾಟಕ ರಾಜ್ಯದ ಒಟ್ಟು 1199 ಅಂತರ್ಜಲ ಅತೀ ಬಳಕೆ ಗ್ರಾಮಪಂಚಾಯತಿಗಳಲ್ಲಿ ಈ ಯೋಜನೆಯನ್ನು ಅನುಷ್ಠಾನಕ್ಕೆ ತರಲಾಗುತ್ತಿದೆ.<br><br>ಈ ಯೋಜನೆಯನ್ನು ರಾಷ್ಟ್ರದ 7 ರಾಜ್ಯಗಳಲ್ಲಿ ಅನುಷ್ಠಾನಕ್ಕೆ ತರಲು ಕೇಂದ್ರ ಸರ್ಕಾರ ಮತ್ತು ವಿಶ್ವ ಬ್ಯಾಂಕ್‌ನಿಂದ ಒಟ್ಟು ರೂ.6,000/-ಕೋಟಿ ನಿಗಧಿಪಡಿಸಲಾಗಿರುತ್ತದೆ. ಅದರಲ್ಲಿ ಕರ್ನಾಟಕ ರಾಜ್ಯಕ್ಕೆ ಅಂದಾಜು ಮೊತ್ತ ರೂ.1201.52 ಕೋಟಿ ನಿಗಧಿಪಡಿಸಲಾಗಿದೆ. ಈ ಯೋಜನೆಯನ್ನು Programme for Result (P for R)ರಡಿಯಲ್ಲಿ ರೂಪಿಸಲಾಗಿದೆ.<br><br>ಅದರಂತೆ ಈ ಯೋಜನೆಯನ್ನು 2 ವಿಭಾಗವಾಗಿ ವಿಂಗಡಿಸಲಾಗಿದೆ. 1) ಸಾಂಸ್ಥಿಕ ಮತ್ತು ಸಾಮರ್ಥ್ಯ ಬಲವರ್ಧನೆ: (Institution Strengthening and Capacity Building) ರಡಿಯಲ್ಲಿ ಕೈಗೊಳ್ಳಲು ಉದ್ದೇಶಿಸಿರುವ ವಿವಿಧ ಚಟುವಟಿಕೆ ಹಾಗೂ ಕಾಮಗಾರಿಗಳಿಗೆ ಒಟ್ಟು ರೂ.194.51 ಕೋಟಿಗಳ ಅನುದಾನವನ್ನು ಇರಿಸಲಾಗಿದೆ. ಅದರಂತೆ, ಈ ಯೋಜನೆಯನ್ನು ಸುಸ್ಥಿರ ರೀತಿಯಲ್ಲಿ ಅನುಷ್ಠಾನಗೊಳಿಸಲು ರಾಜ್ಯ ಕಾರ್ಯಕ್ರಮ ನಿರ್ವಹಣಾ ಘಟಕ ಮತ್ತು ಪ್ರತಿ ಜಿಲ್ಲೆಗಳಲ್ಲಿ ಜಿಲ್ಲಾ ಕಾರ್ಯಕ್ರಮ ನಿರ್ವಹಣಾ ಘಟಕಗಳನ್ನು ಸ್ಥಾಪಿಸಲಾಗಿದ್ದು, ಇಲ್ಲಿ ಕಾರ್ಯನಿರ್ವಹಿಸಲು ತಜ್ಞರನ್ನು ಹಾಗೂ ಮಾನವ ಸಂಪನ್ಮೂಲ ಸಿಬ್ಬಂದಿಗಳನ್ನು ಹೊರಗುತ್ತಿಗೆ ಆಧಾರದ ಮೇಲೆ ಮಾನವ ಸಂಪನ್ಮೂಲ ಒದಗಿಸುವ ಸಂಸ್ಥೆಯ ಮುಖಾಂತರ ಪಡೆಯಲಾಗಿದೆ.<br><br>2) ಪ್ರೋತ್ಸಾಹಧನ ಘಟಕ (Incentive Funds) ರಡಿಯಲ್ಲಿ ಒಟ್ಟು 5 ಸೂಚಕಗಳನ್ನು DLI (Disbursement Linked Indicators)ಗಳನ್ನು ಒಳಗೊಂಡಿದ್ದು, ಮತ್ತು ಇದಕ್ಕೆ ಪ್ರತಿ ಸೂಚಕದ ಎದುರಲ್ಲಿ ಸಾಧಿಸಿದ ಪ್ರಗತಿಗೆ ಒಟ್ಟು ರೂ.1007.01 ಕೋಟಿಗಳನ್ನು ರಾಜ್ಯಕ್ಕೆ ಮೀಸಲಿಡಲಾಗಿದೆ.<br><br>ಮೇಲೆ ತಿಳಿಸಿರುವ ಎಲ್ಲಾ 1199 ಗ್ರಾಮಪಂಚಾಯತಿಗಳಲ್ಲಿ ಜಲ ಭದ್ರತಾ ಯೋಜನೆಯನ್ನು ಸಿದ್ಧಪಡಿಸಿ, ಮೊದಲನೇ ಹಂತದಲ್ಲಿ 182 , ಎರಡನೇ ಹಂತದಲ್ಲಿ 582 ಮತ್ತು ಮೂರನೇ ಹಂತದಲ್ಲಿ 433 ಜಲ ಭದ್ರತಾ ಯೋಜನೆಗಳನ್ನು ಅಂದರೆ, ಒಟ್ಟು 1199 ಜಲ ಭದ್ರತಾ ಯೋಜನೆಗಳನ್ನು ಅಟಲ್ ಭೂಜಲ ಯೋಜನೆ, ರಾಷ್ಟ್ರ ಕಾರ್ಯಕ್ರಮ ನಿರ್ವಹಣಾ ಘಟಕ, ನವದೆಹಲಿ ರವರಿಗೆ ಸಲ್ಲಿಸಲಾಗಿದೆ. |
|---|---|---|

| | | |
|---|---|---|
| | | ಈಗಾಗಲೇ ಸಿದ್ಧಪಡಿಸಿರುವ ಜಲ ಭದ್ರತಾ ಯೋಜನೆಗಳಿಂದ ಪಂಚಾಯತಿಗಳಲ್ಲಿ ಇರುವ ನೀರಿನ ಲಭ್ಯತೆ ಮತ್ತು ನೀರಿನ ಬೇಡಿಕೆಯನ್ನು ಮೌಲ್ಯ ಮಾಪನ ಮಾಡುವುದರಿಂದ ಗ್ರಾಮಪಂಚಾಯತಿಯಲ್ಲಿ ಕೊರತೆಯನ್ನು ಅಂದಾಜಿಸಬಹುದಾಗಿದೆ. ಈ ನೀರಿನ ಕೊರತೆಯನ್ನು ಸರಿದೂಗಿಸಬೇಕಾಗಿರುವುದರಿಂದ ನೀರಿನ ಬೇಡಿಕೆ ಕಡಿಮೆ ಮತ್ತು ನೀರಿನ ಮರು ಪೂರ್ಣ ಮಾಡುವಂತಹ ಕಾಮಗಾರಿಗಳನ್ನು ಜಲ ಭದ್ರತಾ ಯೋಜನೆಗಳಲ್ಲಿ ಪ್ರಸ್ತಾಪಿಸಲಾಗಿದ್ದು ಮತ್ತು ಜಲ ಭದ್ರತಾ ಯೋಜನೆಯಡಿ ಪ್ರಸ್ತಾಪಿಸಲಾಗಿರುವ ಕಾಮಗಾರಿಗಳನ್ನು ಪಾಲುದಾರ ಇಲಾಖೆಗಳ ಮೂಲಕ ಅನುಷ್ಠಾನಗೊಳಿಸಲಾಗುತ್ತಿದೆ.<br><br>ಸಮುದಾಯದಲ್ಲಿ ಅಂತರ್ಜಲ ಸಂರಕ್ಷಣೆ ಬಗ್ಗೆ ಹಾಗೂ ಯೋಜನೆಯಲ್ಲಿ ಪಾಲುಗೊಳ್ಳುವುದಕ್ಕಾಗಿ ಅರಿವು ಮೂಡಿಸಲು ಹಲವಾರು ಕಾರ್ಯಕ್ರಮಗಳನ್ನು ಕೈಗೊಳ್ಳಲಾಗುತ್ತಿದೆ. (**ಉದಾ:** ಗ್ರಾಮ ಸಭೆ, ಕಾಲಾಜಾಥ, ಪೋಸ್ಟರ್, ವಾಲ್ ಪೇಂಟಿಂಗ್, ಸನ್ ಬೋರ್ಡ್ ಅಳವಡಿಕೆ ಮತ್ತು ಇತ್ಯಾದಿ) |
| 3. | ಈ ಯೋಜನೆಯ ಅನುಷ್ಠಾನಕ್ಕೆ ಕುರಿತಂತೆ ಕಡೂರು ವಿಧಾನಸಭಾ ಕ್ಷೇತ್ರಕ್ಕೆ ಮತ್ತು ರಾಜ್ಯಕ್ಕೆ ಆರ್ಥಿಕ ನೆರವು ಮತ್ತು ಅನುದಾನಗಳ ಬಿಡುಗಡೆ ಕುರಿತು ಪ್ರಾರಂಭದಿಂದ ಇಲ್ಲಿಯವರೆಗೂ -ಡಿಪಿಎಂಯು ವಾರು, ತಾಲೂಕು, ಜಿಲ್ಲಾವಾರು ಪೂರ್ಣ ಮಾಹಿತಿ ನೀಡುವುದು | ಅಟಲ್ ಭೂಜಲ ಯೋಜನೆಯು ಕೇಂದ್ರ ಸರ್ಕಾರದ ಯೋಜನೆಯಾಗಿದ್ದು, ಶೇ.100 ರಷ್ಟು ವೆಚ್ಚವನ್ನು ಭಾರತ ಸರ್ಕಾರ , ವಿಶ್ವ ಬ್ಯಾಂಕ್ ನೆರವಿನೊಂದಿಗೆ ಭರಿಸಲಿದೆ. ಅನುದಾನ ಬಿಡುಗಡೆ ಸಂಬಂಧಿಸಿದ ಮಾಹಿತಿಯನ್ನು ಅನುಬಂಧ-2ರಲ್ಲಿ ನೀಡಲಾಗಿದೆ. |
| 4 | ಈ ಯೋಜನೆಯನ್ನು ಅನುಷ್ಠಾನಗೊಳಿಸಲು ಕಡೂರು ವಿಧಾನಸಭಾ ಕ್ಷೇತ್ರ ವ್ಯಾಪ್ತಿಯಲ್ಲಿರುವ ಕಚೇರಿಯ ಅಧಿಕಾರಿಗಳು ಮತ್ತು ಸಿಬ್ಬಂದಿಗಳ ಮಂಜೂರಾತಿ, ಕಾರ್ಯನಿರ್ವಹಿಸುತ್ತಿರುವ ಹಾಗೂ ಖಾಲಿ ಹುದ್ದೆಗಳ ಮಾಹಿತಿಯೊಂದಿಗೆ ಅವರುಗಳ ಕಾರ್ಯ ಹಂಚಿಕೆ ಮತ್ತು ಕೆಲಸಗಳ ನಿರ್ವಹಣೆ ಕುರಿತು ಅಧಿಕಾರಿ ಹಾಗೂ ಸಿಬ್ಬಂದಿವಾರು ಪೂರ್ಣ ಮಾಹಿತಿ ನೀಡುವುದು | ಈ ಯೋಜನೆಯನ್ನು ಜಿಲ್ಲಾ ಮಟ್ಟದಲ್ಲಿ ಅನುಷ್ಠಾನಗೊಳಿಸಲು ಜಿಲ್ಲೆಯಲ್ಲಿ ಜಿಲ್ಲಾ ಕಾರ್ಯಕ್ರಮ ನಿರ್ವಹಣಾ ಘಟಕವನ್ನು ಸ್ಥಾಪಿಸಲಾಗಿದೆ.<br><br>ಜಿಲ್ಲಾ ಕಾರ್ಯಕ್ರಮ ನಿರ್ವಹಣಾ ಘಟಕ, ಚಿಕ್ಕಮಗಳೂರು ಕಾರ್ಯನಿರ್ವಹಿಸುತ್ತಿರುವ ಅಧಿಕಾರಿಗಳ/ ಸಿಬ್ಬಂದಿಗಳ ವಿವರ..<br>1. ಡಿ.ಪಿ.ಎಂ.ಯು ಹೊರಗುತ್ತಿಗೆ ಆಧಾರದ ಮೇಲೆ ನೇಮಕವಾಗಿರುವ ತಜ್ಞರು ಮತ್ತು ಮಾನವ ಸಂಪನ್ಮೂಲ ಸಿಬ್ಬಂದಿಗಳ ವಿವರಗಳು ಈ ಕೆಳಕಂಡಂತಿವೆ. |

| | | | |
|---|---|---|---|
| 1. | ಜಲ ತಜ್ಞರು, | 1 | ಭರ್ತಿಯಾಗಿರುತ್ತದೆ |
| 2. | ಕೃಷಿ ತಜ್ಞರು | 1 | ಭರ್ತಿಯಾಗಿರುತ್ತದೆ |
| 3. | IEC ತಜ್ಞರು | 1 | ಭರ್ತಿಯಾಗಿರುತ್ತದೆ |
| 4 | ಡೇಟಾ ಎಂಟ್ರಿ ಆಪರೇಟರ್ | 1 | ಭರ್ತಿಯಾಗಿರುತ್ತದೆ |
| 5 | ಮಲ್ಟಿಟಾಸಕ್ಕಿಂಗ್ ಸ್ಟಾಫ್ | 1 | ಭರ್ತಿಯಾಗಿರುತ್ತದೆ |
| 6 | ಫೀಲ್ಡ್ ಸ್ಟಾಫ್ | 1 | ಭರ್ತಿಯಾಗಿರುತ್ತದೆ |
| 7 | ಸಹಾಯಿವಾಲ/ ಗ್ರೂಫ್ –ಡಿ. | 1 | ಭರ್ತಿಯಾಗಿರುತ್ತದೆ |

| | | |
|---|---|---|
| | | ಜಿಲ್ಲಾ ಕಾರ್ಯಕ್ರಮ ನಿರ್ವಹಣಾ ಘಟಕದೊಂದಿಗೆ ಕಡೂರು ತಾಲ್ಲೂಕಿನಲ್ಲಿ ಅನುಷ್ಠಾನ ಪಾಲುದಾರ ಸಂಸ್ಥೆಯಾಗಿ ರೂ ರ್ ಡೆವಲಪ್ ಮೆಂಟ್ ಸೊಸೈಟಿ ಸಂಸ್ಥೆಯು ಕಾರ್ಯ ನಿರ್ವಹಿಸುತ್ತಿದ್ದು, ಸದರಿ ಸಂಸ್ಥೆಯು ಡಿ.ಪಿ.ಎಂ.ಯು ಮತ್ತು ಸಮುದಾಯದ ನಡುವೆ ಸಂಪರ್ಕ ಕೊಂಡಿಯಂತೆ ಕೆಳಕಂಡ ಕೆಲಸ ಕಾರ್ಯಗಳನ್ನು ನಿರ್ವಹಿಸುತ್ತಿದೆ.<br>1. Block wise Hydrogeological Reports ತಯಾರಿಸಲು ಅವಶ್ಯಕವಿರುವ ಅಂತರ್ಜಲ ಮಟ್ಟವನ್ನು ಸಂಗ್ರಹಿಸುವುದು.<br>2. ಅಧ್ಯಯನ ಕೊಳವೆಬಾವಿಗಳಿಂದ ಪ್ರತಿ ಮಾಹೆ ಸ್ಥಿರ ಅಂತರ್ಜಲ ಮಟ್ಟವನ್ನು ಮಾಪನ ಮಾಡುವುದು.<br>3. ಗ್ರಾಮಪಂಚಾಯತಿ ಮಟ್ಟದಲ್ಲಿ ಕೊಳವೆಬಾವಿಗಳ Inventory ಮಾಡುವುದು.<br>4. ಅಧ್ಯಯನ ಕೊಳವೆಬಾವಿಗಳ ನೀರಿನ ಗುಣಮಟ್ಟವನ್ನು ವಿಶ್ಲೇಷಿಸುವ ಸಲುವಾಗಿ ಸಂಗ್ರಹಿಸಿ, ಪ್ರಯೋಗಲಾಯಗಳಿಗೆ ಕಳುಹಿಸುವುದು.<br>5. ಕ್ರಮಸಂಖ್ಯೆ 1 ರಿಂದ 5 ರಲ್ಲಿನ ಮಾಹಿತಿಯನ್ನು ಸಾರ್ವಜನಿಕವಾಗಿ ಪ್ರದರ್ಶಿಸಿ ಈ ಬಗ್ಗೆ ಸಮುದಾಯಕ್ಕೆ ಅರಿವು ಮೂಡಿಸುವುದು.<br>6. ಅಟಲ್ ಭೂಜಲ ಯೋಜನೆಯ ಬಗ್ಗೆ ಸಮುದಾಯದಲ್ಲಿ ಅರಿವು ಮೂಡಿಸುವ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವುದು.<br>7. ಸಮುದಾಯ ಸಹಭಾಗಿತ್ವದಲ್ಲಿ ಗ್ರಾಮ ಪಂಚಾಯತಿವಾರು ಜಲ ಭದ್ರತಾ ಯೋಜನೆಗಳನ್ನು ತಯಾರಿಸುವುದು.<br>8. ಗ್ರಾಮ ಸಭೆಗಳನ್ನು ಆಯೋಜಿಸಿ, ಸದರಿ ಜಲ ಭದ್ರತಾ ಯೋಜನೆಗೆ ಸಮುದಾಯದ ಅನುಮೋದನೆಯನ್ನು ಪಡೆಯುವುದು.<br>9. ಅನುಮೋದಿಸಿದಂತಹ ಜಲ ಭದ್ರತಾ ಯೋಜನೆಗಳನ್ನು MIS ನಲ್ಲಿ ಅಳವಡಿಸುವುದು.<br>10. ಜಲ ಭದ್ರತಾ ಯೋಜನೆಯಲ್ಲಿ ಪ್ರಸ್ತಾಪಿಸಿರುವ Demand Side & Supply side ಕಾಮಗಾರಿಗಳನ್ನು ಒಗ್ಗೂಡಿಸುವಿಕೆಯಡಿ ಪಾಲುದಾರ ಇಲಾಖೆಗಳು ಕೈಗೊಳ್ಳುವಂತೆ ಕ್ರಿಯಾ ಯೋಜನೆಯನ್ನು ತಯಾರಿಸುವುದು.<br>11. ಕ್ರಮಸಂಖ್ಯೆ 9 & 10ರಲ್ಲಿನ ಮಾಹಿತಿಯನ್ನು ಸಾರ್ವಜನಿಕವಾಗಿ ಪ್ರದರ್ಶಿಸಿ ಈ ಬಗ್ಗೆ ಸಮುದಾಯಕ್ಕೆ ಅರಿವು ಮೂಡಿಸುವುದು.<br>12. NPMU ವತಿಯಿಂದ ನೀಡಲಾದ ಮಾರ್ಗಸೂಚಿಯಂತೆ ಪ್ರತಿ ತಾಲ್ಲೂಕಿನಲ್ಲಿ ಅಂತರ್ಜಲದ ಏರಿಳಿತವನ್ನು ತೋರಿಸುವಂತಹ 10 ಅಧ್ಯಯನ ಕೊಳವೆಬಾವಿಗಳನ್ನು ಗುರಿತಿಸುವುದು.<br>13. ರಾಜ್ಯ ಕಾರ್ಯಕ್ರಮ ನಿರ್ವಹಣಾ ಘಟಕ ಹಾಗೂ ಜಿಲ್ಲಾ ಕಾರ್ಯಕ್ರಮ ನಿರ್ವಹಣಾ ಘಟಕಗಳಿಂದ ಸೂಚಿಸಲಾದ ಕೆಲಸಗಳನ್ನು ನಿರ್ವಹಿಸುವುದು. |

| 5 | ಕಡೂರು ತಾಲೂಕಿನಲ್ಲಿ ಈ ಯೋಜನೆಯ ಅನುಷ್ಠಾನದ ಕುರಿತು ಇದುವರೆಗೂ ಸರ್ಕಾರ ಕೈಗೊಂಡಿರುವ ಕ್ರಮಗಳೇನು? | 1. ಮುಖ್ಯ ಕಾರ್ಯನಿರ್ವಹಣಾ ಅಧಿಕಾರಿಯವರು ಜಿಲ್ಲಾ ಕಾರ್ಯಕ್ರಮ ನಿರ್ವಹಣಾ ಘಟಕದ ಅಧ್ಯಕ್ಷರಾಗಿರುತ್ತಾರೆ.<br>2. ಈ ಯೋಜನೆಯನ್ನು ಸುಸ್ಥಿರವಾಗಿ ಅನುಷ್ಠಾನಗೊಳಿಸಲು ಜಿಲ್ಲಾ ಮಟ್ಟದಲ್ಲಿ ನೋಡಲ್ ಅಧಿಕಾರಿಯವರನ್ನು ನೇಮಿಸಲಾಗಿದೆ.<br>3. ಈ ಯೋಜನೆಯನ್ನು ಜಿಲ್ಲಾ ಮಟ್ಟದಲ್ಲಿ ಅನುಷ್ಠಾನಗೊಳಿಸಲು ಜಿಲ್ಲೆಯಲ್ಲಿ ಜಿಲ್ಲಾ ಕಾರ್ಯಕ್ರಮ ನಿರ್ವಹಣಾ ಘಟಕವನ್ನು ಸ್ಥಾಪಿಸಲಾಗಿದೆ.<br>4. ರಾಜ್ಯ ಕಾರ್ಯ ಕ್ರಮ ನಿರ್ವಹಣಾ ಘಟಕದಿಂದ ಅನುಷ್ಠಾನ ಪಾಲುದಾರರನ್ನು ನೇಮಿಸಲಾಗಿರುತ್ತದೆ.<br>5. ಕಡೂರು ತಾಲ್ಲೂಕಿನಲ್ಲಿ ಯೋಜನೆಯನ್ನು ಗ್ರಾಮ ಪಂಚಾಯತಿಯ ಮಟ್ಟದಲ್ಲಿ ಸಮರ್ಪಕವಾಗಿ ಅನುಷ್ಠಾನಗೊಳಿಸಲು ಜಿಲ್ಲಾ ಪಾಲುದಾರರಾದ ಸಂಸ್ಥೆ (DIP) ಯಾಗಿ ಆಯ್ಕೆ ಮಾಡಲಾಗಿರುತ್ತದೆ. ಸದರಿ ಸಂಸ್ಥೆಯು ಯೋಜನೆಯ ಅನುಷ್ಠಾನದ ಎಲ್ಲಾ ಹಂತದಲ್ಲಿ ಗ್ರಾಮ ಪಂಚಾಯತಿ, DPMU, SPMU ರವರ ಸಮನ್ವಯದೊಂದಿಗೆ ಕಾರ್ಯ ನಿರ್ವಹಿಸುವುದಾಗಿರುತ್ತದೆ.<br>6. ಸಾಂಸ್ಥಿಕ ಬಲವರ್ಧನೆಯಡಿ ಒಟ್ಟು 34 ಅಧ್ಯಯನ ಕೊಳವೆ ಬಾವಿಗಳನ್ನು ನಿರ್ಮಿಸಲಾಗಿದೆ ಹಾಗೂ ಹೊಸ 4 ಅಧ್ಯಯನ ಕೊಳವೆ ಬಾವಿಗಳನ್ನು ಕೊರೆಯಲು ಪ್ರಸ್ತಾವನೆಯನ್ನು ಸಲ್ಲಿಸಲಾಗಿದೆ.<br>7. ಅಂತರ್ಜಲ ಮಟ್ಟವನ್ನು ಮಾಪನ ಮಾಡುವ ಬಗ್ಗೆ ಸಮುದಾಯದಲ್ಲಿ ಡಿ.ಐ.ಪಿ. ಮುಖಾಂತರ ಅರಿವು ಮೂಡಿಸಲು 19 Automatic Water Level Indicator ಗಳನ್ನು ಸರಬರಾಜು ಮಾಡಲಾಗಿದೆ.<br>8. ಅಂತರ್ಜಲ ಮಟ್ಟವನ್ನು ನಿಯಮಿತವಾಗಿ ಪ್ರತಿ ಗ್ರಾಮಪಂಚಾಯತಿ ಅಧ್ಯಯನ ಕೊಳವೆಬಾವಿಗಳನ್ನು ಮಾಪನ ಮಾಡಲು ಈವರೆಗೂ 52 DWLR ಗಳನ್ನು ಅಳವಡಿಸಲಾಗಿರುತ್ತದೆ.<br>9. ಕಡೂರು ತಾಲ್ಲೂಕಿನ 57 ಗ್ರಾಮಪಂಚಾಯತಿಗಳ ಜಲ ಭದ್ರತಾ ಯೋಜನೆಗಳನ್ನು ಸಿದ್ಧಪಡಿಸಲಾಗಿದ್ದು, ಅವುಗಳನ್ನು ರಾಷ್ಟ್ರ ಕಾರ್ಯಕ್ರಮ ನಿರ್ವಹಣಾ ಘಟಕ, ನವದೆಹಲಿ ರವರಿಗೆ ಸಲ್ಲಿಸಲಾಗಿದೆ. |
|---|---|---|

ಸಂಖ್ಯೆ:ಎಂಐಡಿ 237 ಎಲ್‌ಎಕ್ಯೂ 2022

(ಜೆ.ಸಿ.ಮಾಧುಸ್ವಾಮಿ)
ಕಾನೂನು, ಸಂಸದೀಯ ವ್ಯವಹಾರಗಳು
ಮತ್ತು ಶಾಸನ ರಚನೆ ಹಾಗೂ ಸಣ್ಣ ನೀರಾವರಿ
ಸಚಿವರು

# ಕರ್ನಾಟಕ ವಿಧಾನಸಭೆ

| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 338 |
|---|---|
| ಸದಸ್ಯರ ಹೆಸರು | ಶ್ರೀ. ಅಶ್ವಿನ್ ಕುಮಾರ್ ಎಂ. (ಟಿ. ನರಸೀಪುರ) |
| ಉತ್ತರಿಸಬೇಕಾದ ದಿನಾಂಕ | 13-09-2022 |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ. | ಮೈಸೂರು ಜಿಲ್ಲೆಯ ಟಿ. ನರಸೀಪುರ ತಾಲ್ಲೂಕಿನಲ್ಲಿ ನಮ್ಮ ಗ್ರಾಮ ನಮ್ಮ ರಸ್ತೆ ಯೋಜನೆಯಡಿ ಕಳೆದ ಮೂರು ವರ್ಷಗಳಲ್ಲಿ ಯಾವ ಮಣ್ಣಿನ ರಸ್ತೆಯನ್ನು ಹಾಗೂ ಎಷ್ಟು ಕಿ.ಮೀ ರಸ್ತೆ ಕಾಮಗಾರಿಗಳನ್ನು ಅನುಷ್ಠಾನಗೊಳಿಸಲಾಗಿದೆ; (ವಿವರ ನೀಡುವುದು) | • ನಮ್ಮ ಗ್ರಾಮ ನಮ್ಮ ರಸ್ತೆ ಯೋಜನೆಯು 2017-18 ನೇ ಸಾಲಿನಲ್ಲಿಯೇ ಮುಕ್ತಾಯಗೊಂಡಿದ್ದು, 2018-19ನೇ ಸಾಲಿನಿಂದ ನಮ್ಮ ಗ್ರಾಮ ನಮ್ಮ ರಸ್ತೆ ಯೋಜನೆಯಡಿ ಯಾವುದೇ ಹೊಸ ಕಾಮಗಾರಿಗಳಿಗೆ ಅನುಮೋದನೆಯನ್ನು ನೀಡಿರುವುದಿಲ್ಲ.<br>• ಮುಂದುವರೆದು, ಹಿಂದಿನ ಸಾಲುಗಳಲ್ಲಿ ನಮ್ಮ ಗ್ರಾಮ ನಮ್ಮ ರಸ್ತೆ ಯೋಜನೆಯಡಿ ಅನುಮೋದನೆಯಾಗಿದ್ದ ಕಾಮಗಾರಿಗಳು ಭೌತಿಕವಾಗಿ ಪೂರ್ಣಗೊಂಡಿದ್ದು, ಪ್ರಸ್ತುತ ವಾರ್ಷಿಕ ನಿರ್ವಹಣೆಯ ಹಂತದಲ್ಲಿರುವ ಕಾಮಗಾರಿಗಳ ವಿವರಗಳನ್ನು **ಅನುಬಂಧ-1** ರಲ್ಲಿ ನೀಡಲಾಗಿದೆ. |
| ಆ. | ಸದರಿ ಕಾಮಗಾರಿಗಳನ್ನು ಯಾವ ಏಜೆನ್ಸಿ ನಿರ್ವಹಿಸಿದೆ; (ವರ್ಷವಾರು/ಕಾಮಗಾರಿವಾರು ಮಾಹಿತಿ ಒದಗಿಸುವುದು) | ಕಾಮಗಾರಿಗಳನ್ನು ಕೆಆರ್‌ಆರ್‌ಡಿಎಯಿಂದ ಅನುಷ್ಠಾನಗೊಳಿಸಲಾಗಿದ್ದು, ವಿವರಗಳನ್ನು **ಅನುಬಂಧ-1** ರಲ್ಲಿ ನೀಡಲಾಗಿದೆ. |
| ಇ. | ಈ ಯೋಜನೆಯಡಿ ನೀರಾವರಿ ಇಲಾಖೆಯ ನಾಲಾಸೇವಾ ರಸ್ತೆಗಳನ್ನು (Channel Service Roads) ಅಭಿವೃದ್ಧಿಪಡಿಸಲು ಅವಕಾಶವಿದೆಯೇ; (ವಿವರ ಒದಗಿಸುವುದು) | ಜಿಲ್ಲಾ ಗ್ರಾಮೀಣ ರಸ್ತೆಗಳ ನಕ್ಷೆ (DRRP) ಯಲ್ಲಿ ನೀರಾವರಿ ಇಲಾಖೆಯ ನಾಲಾ ಸೇವಾ ರಸ್ತೆಗಳನ್ನು (Channel Service Roads) ಗುರುತಿಸಿ, ಅನುಮೋದನೆಯಾಗಿದ್ದಲ್ಲಿ ಹಾಗೂ ನಾಲಾ ರಸ್ತೆಯು ಜನವಸತಿ ಸಂಪರ್ಕದಲ್ಲಿದ್ದರೆ ಮಾತ್ರ ಅಂತಹ ರಸ್ತೆಗಳನ್ನು ಅಭಿವೃದ್ಧಿಪಡಿಸಲು ಅವಕಾಶವಿರುತ್ತದೆ.<br><br>ಕಾಮಗಾರಿವಾರು ವಿವರಗಳನ್ನು **ಅನುಬಂಧ-2**ರಲ್ಲಿ ನೀಡಲಾಗಿದೆ. |
| ಈ. | ಅವಕಾಶವಿದ್ದಲ್ಲಿ, ಯಾವ ನಾಲಾ ಸೇವಾ ರಸ್ತೆಗಳನ್ನು ಈವರೆಗೆ ಅಭಿವೃದ್ಧಿಪಡಿಸಲಾಗಿದೆ? (ಕಾಮಗಾರಿವಾರು ವಿವರ ಒದಗಿಸುವುದು) | ಈವರೆವಿಗೂ ನಮ್ಮ ಗ್ರಾಮ ನಮ್ಮ ರಸ್ತೆ ಯೋಜನೆ ಹಂತ-4ರಡಿ ಒಟ್ಟು 6.99ಕಿ.ಮೀ ಉದ್ದದ 2 ರಸ್ತೆ ಕಾಮಗಾರಿಗಳನ್ನು ಅಭಿವೃದ್ಧಿಪಡಿಸಲಾಗಿದೆ.<br>ಕಾಮಗಾರಿವಾರು ವಿವರಗಳನ್ನು **ಅನುಬಂಧ-3** ರಲ್ಲಿ ನೀಡಲಾಗಿದೆ. |

(ಬಸವರಾಜ ಬೊಮ್ಮಾಯಿ)
ಮುಖ್ಯಮಂತ್ರಿ

## LAQ-338 ಕ್ಕೆ ಅನುಬಂಧ - 1

ಕಳೆದ ಮೂರು ವರ್ಷಗಳಲ್ಲಿ ನಮ್ಮ ಗ್ರಾಮ ನಮ್ಮ ರಸ್ತೆ ಯೋಜನೆಯಡಿ ಮೈಸೂರು ಜಿಲ್ಲೆಯ ಟಿ.ನರಸೀಪುರ ತಾಲ್ಲೂಕಿನಲ್ಲಿ ಯಾವುದೇ ಹೊಸ ಕಾಮಗಾರಿಗಳು ಅನುಮೋದನೆಗೊಂಡಿರುವುದಿಲ್ಲ ಹಾಗಾಗಿ ಹಿಂದಿನ ಸಾಲುಗಳಲ್ಲಿ ಅನುಮೋದನೆಗೊಂಡಿರುವ ಕಾಮಗಾರಿಗಳು ಭೌತಿಕವಾಗಿ ಪೂರ್ಣಗೊಂಡಿದ್ದು, ವಿವಿಧ ವರ್ಷಗಳ ವಾರ್ಷಿಕ ನಿರ್ವಹಣೆ ಹಂತದಲ್ಲಿರುತ್ತದೆ ವಿವರ ಕೆಳಕಂಡಂತಿದೆ.

| ಕ್ರಮ ಸಂಖ್ಯೆ | ನಮ್ಮ ಗ್ರಾಮ ನಮ್ಮ ರಸ್ತೆ ಯೋಜನೆ ಹಂತ | ವಿಧಾನ ಸಭಾ ಕ್ಷೇತ್ರ / ತಾಲ್ಲೂಕು | ಅನುಮೋದನೆಗೊಂಡ ಆರ್ಥಿಕ ವರ್ಷ | ಪ್ಯಾಕೇಜ್ ಸಂಖ್ಯೆ | ಕಾಮಗಾರಿಯ ಹೆಸರು | ಗುತ್ತಿಗೆದಾರರ ಹೆಸರು | ಕಾಮಗಾರಿ ಪೂರ್ಣಗೊಂಡ ದಿನಾಂಕ | ಪ್ರಸ್ತುತ ಹಂತ (2022-23) | ಭೌತಿಕ ಪ್ರಗತಿ | | | ಆರ್ಥಿಕ ಪ್ರಗತಿ | | |
|---|---|---|---|---|---|---|---|---|---|---|---|---|---|---|
| | | | | | | | | | 2019-20 | 2020-21 | 2021-2022 | 2019-20 | 2020-21 | 2021-2022 |
| 1 | ನಮ್ಮ ಗ್ರಾಮ ನಮ್ಮ ರಸ್ತೆ ಯೋಜನೆ ಹಂತ - 3 | ಟಿ.ನರಸೀಪುರ | 2014-15 | ಕೆ.ಎಸ್-22-24ಎ | ತುರಗನೂರಿನಿಂದ ಕಾಲೂರು ಗಡಿಗೆ (ಕಿರಗಸೂರು) | ಪಿ.ಸುಬ್ರಮಣಿ | 27.03.2017 | 5ನೇ ವರ್ಷದ ವಾರ್ಷಿಕ ನಿರ್ವಹಣೆ ಪೂರ್ಣಗೊಂಡಿದ್ದು ಮತ್ತು 6ನೇ ವರ್ಷದ ಮರು ಡಾಂಬರೀಕರಣ ಮಾಡಬೇಕಾಗಿದೆ | 3ನೇ ವರ್ಷದ ವಾರ್ಷಿಕ ನಿರ್ವಹಣೆ ಪ್ರಗತಿಯಲ್ಲಿದೆ | 4ನೇ ವರ್ಷದ ವಾರ್ಷಿಕ ನಿರ್ವಹಣೆ ಪ್ರಗತಿಯಲ್ಲಿದೆ | 5ನೇ ವರ್ಷದ ವಾರ್ಷಿಕ ನಿರ್ವಹಣೆ ಪ್ರಗತಿಯಲ್ಲಿದೆ | 232200.00 | 299280.00 | 387000.00 |
| 2 | ನಮ್ಮ ಗ್ರಾಮ ನಮ್ಮ ರಸ್ತೆ ಯೋಜನೆ ಹಂತ - 3 | ಟಿ.ನರಸೀಪುರ | 2014-15 | ಕೆ.ಎಸ್-22-24ಬಿ | ಕರಿಹುರಳಿಕೊಪ್ಪಲು, ಗುದ್ದರಕೊಪ್ಪಲು ಮೂಲಕ ಅಂಕನಹಳ್ಳಿಯಿಂದ ರಸ್ತೆ-ಮಹಾಸಿಕ್ಕನಹಳ್ಳಿಗೆ | ಕಿಶೋರ್ ಕುಮಾರ್ | 28.12.2018 | 4ನೇ ವರ್ಷದ ವಾರ್ಷಿಕ ನಿರ್ವಹಣೆ ಪ್ರಗತಿಯಲ್ಲಿದೆ | 1ನೇ ವರ್ಷದ ವಾರ್ಷಿಕ ನಿರ್ವಹಣೆ ಪ್ರಗತಿಯಲ್ಲಿದೆ | 2ನೇ ವರ್ಷದ ವಾರ್ಷಿಕ ನಿರ್ವಹಣೆ ಪ್ರಗತಿಯಲ್ಲಿದೆ | 3ನೇ ವರ್ಷದ ವಾರ್ಷಿಕ ನಿರ್ವಹಣೆ ಪ್ರಗತಿಯಲ್ಲಿದೆ | 0.00 | 122700.00 | 204500.00 |
| 3 | ನಮ್ಮ ಗ್ರಾಮ ನಮ್ಮ ರಸ್ತೆ ಯೋಜನೆ ಹಂತ - 3 | ಟಿ.ನರಸೀಪುರ | 2014-15 | ಕೆ.ಎಸ್-22-24ಬಿ | ರಸ್ತೆ-ಕೆಂದನಕೊಪ್ಪಲು ಟಿ.ಎಸ್.ಪುರ ಮುಖ್ಯ ರಸ್ತೆಗೆ ಸುಧಾರಣೆಗಳು | | | | | | | 0.00 | 12600.00 | 21000.00 |
| 4 | ನಮ್ಮ ಗ್ರಾಮ ನಮ್ಮ ರಸ್ತೆ ಯೋಜನೆ ಹಂತ - 3 | ಟಿ.ನರಸೀಪುರ | 2014-15 | ಕೆ.ಎಸ್-22-24ಬಿ | ರಸ್ತೆ-ಆಚರಯ್ಯನಹುಂಡಿಗೆ ದೊಡ್ಡಬಾಗಿಲುಗೆ | | | | | | | 0.00 | 51900.00 | 86500.00 |
| 5 | ನಮ್ಮ ಗ್ರಾಮ ನಮ್ಮ ರಸ್ತೆ ಯೋಜನೆ ಹಂತ - 3 | ಟಿ.ನರಸೀಪುರ | 2014-15 | ಕೆ.ಎಸ್-22-25ಎ | ರಸ್ತೆ-ಕೃಷ್ಣಾಪುರದಿಂದ ಕಬ್ಬೆಹುಂಡಿಗೆ (ಎಸ್‌ಸಿಪಿ) | | | | | | | 0.00 | 80560.00 | 116600.00 |
| 6 | ನಮ್ಮ ಗ್ರಾಮ ನಮ್ಮ ರಸ್ತೆ ಯೋಜನೆ ಹಂತ - 3 | ಟಿ.ನರಸೀಪುರ | 2014-15 | ಕೆ.ಎಸ್-22-25ಬಿ | ಮುದುಕ್ಕೋರ್ ನಿಂದ ಜಿಲ್ಲಾ ಗಡಿ (ಕೊಡಗಹಳ್ಳಿ) | ಕೆ.ನಾಗರಾಜು | 30.12.2017 | 5ನೇ ವರ್ಷದ ವಾರ್ಷಿಕ ನಿರ್ವಹಣೆ ಪ್ರಗತಿಯಲ್ಲಿದೆ | 3ನೇ ವರ್ಷದ ವಾರ್ಷಿಕ ನಿರ್ವಹಣೆ ಪ್ರಗತಿಯಲ್ಲಿದೆ | 4ನೇ ವರ್ಷದ ವಾರ್ಷಿಕ ನಿರ್ವಹಣೆ ಪ್ರಗತಿಯಲ್ಲಿದೆ | 5ನೇ ವರ್ಷದ ವಾರ್ಷಿಕ ನಿರ್ವಹಣೆ ಪ್ರಗತಿಯಲ್ಲಿದೆ | 50850.00 | 65540.00 | 84750.00 |
| 7 | ನಮ್ಮ ಗ್ರಾಮ ನಮ್ಮ ರಸ್ತೆ ಯೋಜನೆ ಹಂತ - 3 | ಟಿ.ನರಸೀಪುರ | 2014-15 | ಕೆ.ಎಸ್-22-25ಬಿ | ಮರಡಿಪುರದಿಂದ ತಲಕಾಡು ಮುಖ್ಯ ರಸ್ತೆ (ಸಿಬಿ ಹುಂಡಿ) | | | | | | | 46350.00 | 61480.00 | 77250.00 |
| 8 | ನಮ್ಮ ಗ್ರಾಮ ನಮ್ಮ ರಸ್ತೆ ಯೋಜನೆ ಹಂತ - 3 | ಟಿ.ನರಸೀಪುರ / ವರುಣ | 2014-15 | ಕೆ.ಎಸ್-22-26ಎ | ರಸ್ತೆ-ಕಿರಗಸೂರಿನಿಂದ ಬೆಳಗೆರೆಹುಂಡಿಗೆ | ಪಿ.ದಾಸರಥರಾಮ ರೆಡ್ಡಿ | 02.10.2016 | 5ನೇ ವರ್ಷದ ವಾರ್ಷಿಕ ನಿರ್ವಹಣೆ ಪೂರ್ಣಗೊಂಡಿದ್ದು ಮತ್ತು 6ನೇ ವರ್ಷದ ಮರು ಡಾಂಬರೀಕರಣ ಮಾಡಬೇಕಾಗಿದೆ | 3ನೇ ವರ್ಷದ ವಾರ್ಷಿಕ ನಿರ್ವಹಣೆ ಪ್ರಗತಿಯಲ್ಲಿದೆ | 4ನೇ ವರ್ಷದ ವಾರ್ಷಿಕ ನಿರ್ವಹಣೆ ಪ್ರಗತಿಯಲ್ಲಿದೆ | 5ನೇ ವರ್ಷದ ವಾರ್ಷಿಕ ನಿರ್ವಹಣೆ ಪ್ರಗತಿಯಲ್ಲಿದೆ | 160202.00 | 0.00 | 85689.00 |
| 9 | ನಮ್ಮ ಗ್ರಾಮ ನಮ್ಮ ರಸ್ತೆ ಯೋಜನೆ ಹಂತ - 3 | ಟಿ.ನರಸೀಪುರ / ವರುಣ | 2014-15 | ಕೆ.ಎಸ್-22-26ಎ | ರಸ್ತೆ-ಹಾದ್ನೂರಿನಿಂದ ಗಾಣಗನೂರುಗೆ | | | | | | | 370567.00 | 0.00 | 198211.00 |
| 10 | ನಮ್ಮ ಗ್ರಾಮ ನಮ್ಮ ರಸ್ತೆ ಯೋಜನೆ ಹಂತ - 3 | ಟಿ.ನರಸೀಪುರ / ವರುಣ | 2014-15 | ಕೆ.ಎಸ್-22-26ಬಿ | ರಸ್ತೆ-ರಂಗಸಮುದ್ರದಿಂದ ಎಲವಲಗೌಡನಹುಂಡಿಗೆ | | 21.09.2016 | | | | | 158583.00 | 0.00 | 84824.00 |
| 11 | ನಮ್ಮ ಗ್ರಾಮ ನಮ್ಮ ರಸ್ತೆ ಯೋಜನೆ ಹಂತ - 3 | ಟಿ.ನರಸೀಪುರ / ವರುಣ | 2014-15 | ಕೆ.ಎಸ್-22-27 | ರಸ್ತೆ-ಮನ್ನಹುಂಡಿಯಿಂದ ಈಶ್ವರಗೌಡನಹಳ್ಳಿಗೆ | ಶ್ರೀ ಬಿ ಎಸ್ ಸತೀಶ್ ಕುಮಾರ್ | 30.12.2016 | 5ನೇ ವರ್ಷದ ವಾರ್ಷಿಕ ನಿರ್ವಹಣೆ ಪೂರ್ಣಗೊಂಡಿದೆ ಮತ್ತು 6ನೇ ವರ್ಷದ ಮರು ಡಾಂಬರೀಕರಣ ಮಾಡಬೇಕಾಗಿದೆ | 3ನೇ ವರ್ಷದ ವಾರ್ಷಿಕ ನಿರ್ವಹಣೆ ಪ್ರಗತಿಯಲ್ಲಿದೆ | 4ನೇ ವರ್ಷದ ವಾರ್ಷಿಕ ನಿರ್ವಹಣೆ ಪ್ರಗತಿಯಲ್ಲಿದೆ | 5ನೇ ವರ್ಷದ ವಾರ್ಷಿಕ ನಿರ್ವಹಣೆ ಪ್ರಗತಿಯಲ್ಲಿದೆ | 360309.00 | 0.00 | 558984.00 |
| 12 | ನಮ್ಮ ಗ್ರಾಮ ನಮ್ಮ ರಸ್ತೆ ಯೋಜನೆಯಡಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗ | ಟಿ.ನರಸೀಪುರ | 2016-17 | ಕೆ.ಎನ್.ಎಸ್.ಸಿ.ಪಿ-22-03 | ಹೊರಹಳ್ಳಿ ಹರಿಜನ ಕಾಲೋನಿಗೆ ಎಸ್ -3 ರಸ್ತೆ | ಎಸ್ ಎಸ್ ಮಂಜುನಾಥ್ | 31.01.2018 | 5ನೇ ವರ್ಷದ ವಾರ್ಷಿಕ ನಿರ್ವಹಣೆ ಪ್ರಗತಿಯಲ್ಲಿದೆ | 2ನೇ ವರ್ಷದ ವಾರ್ಷಿಕ ನಿರ್ವಹಣೆ ಪ್ರಗತಿಯಲ್ಲಿದೆ | 3ನೇ ವರ್ಷದ ವಾರ್ಷಿಕ ನಿರ್ವಹಣೆ ಪ್ರಗತಿಯಲ್ಲಿದೆ | 4ನೇ ವರ್ಷದ ವಾರ್ಷಿಕ ನಿರ್ವಹಣೆ ಪ್ರಗತಿಯಲ್ಲಿದೆ | 15012.00 | 0.00 | 0.00 |
| 13 | | ಟಿ.ನರಸೀಪುರ | 2016-17 | | ದೊಡ್ಡಬಾಗಿಲು ಮುಖ್ಯ ರಸ್ತೆ ಕರಗಳ್ಳಿ ಹರಿಜನ ಕಾಲೋನಿಗೆ | | | | | | | 16728.00 | 0.00 | 0.00 |
| 14 | ನಮ್ಮ ಗ್ರಾಮ ನಮ್ಮ ರಸ್ತೆ ಯೋಜನೆ ಹಂತ - 4 | ಟಿ.ನರಸೀಪುರ | 2016-17 | ಕೆ.ಎಸ್-22-40 | ಕಂಜೀಗೌಡನಕೊಪ್ಪಲು ಅಂಕನಹಳ್ಳಿಯ ಮೂಲಕ ಯಚನಹಳ್ಳಿಯಿಂದ ತುರುಗನೂರಿಗೆ | ಕೆ ಆರ್ ವೆಂಕಟೇಶ್ | 25.03.2019 | 4ನೇ ವರ್ಷದ ವಾರ್ಷಿಕ ನಿರ್ವಹಣೆ ಪ್ರಗತಿಯಲ್ಲಿದೆ | 1ನೇ ವರ್ಷದ ವಾರ್ಷಿಕ ನಿರ್ವಹಣೆ ಪ್ರಗತಿಯಲ್ಲಿದೆ | 2ನೇ ವರ್ಷದ ವಾರ್ಷಿಕ ನಿರ್ವಹಣೆ ಪ್ರಗತಿಯಲ್ಲಿದೆ | 3ನೇ ವರ್ಷದ ವಾರ್ಷಿಕ ನಿರ್ವಹಣೆ ಪ್ರಗತಿಯಲ್ಲಿದೆ | 0.00 | 214460.00 | 330589.00 |
| 15 | ನಮ್ಮ ಗ್ರಾಮ ನಮ್ಮ ರಸ್ತೆ ಯೋಜನೆ ಹಂತ - 4 | ಟಿ.ನರಸೀಪುರ | 2016-17 | ಕೆ.ಎಸ್-22-41 | ಕನ್ನಹಳ್ಳಿ ಮುಗೂರು ಮುಖ್ಯ ರಸ್ತೆ | ಅಶೋಕ್ ಬಿ.ಕೆ | 05.08.2020 | 3ನೇ ವರ್ಷದ ವಾರ್ಷಿಕ ನಿರ್ವಹಣೆ ಪ್ರಗತಿಯಲ್ಲಿದೆ | ಭೌತಿಕವಾಗಿ ಪೂರ್ಣಗೊಂಡಿರುತ್ತದೆ. | 1ನೇ ವರ್ಷದ ವಾರ್ಷಿಕ ನಿರ್ವಹಣೆ ಪ್ರಗತಿಯಲ್ಲಿದೆ | 2ನೇ ವರ್ಷದ ವಾರ್ಷಿಕ ನಿರ್ವಹಣೆ ಪ್ರಗತಿಯಲ್ಲಿದೆ | 0.00 | 0.00 | 136730.00 |
| 16 | ನಮ್ಮ ಗ್ರಾಮ ನಮ್ಮ ರಸ್ತೆ ಯೋಜನೆ ಹಂತ - 4 | ಟಿ.ನರಸೀಪುರ | 2016-17 | ಕೆ.ಎಸ್-22-41 | ಉಕ್ಕಲಗೆರೆಯಿಂದ ನಾಗಲಗೆರೆಗೆ | | | | | | | 0.00 | 0.00 | 57904.00 |
| 17 | ನಮ್ಮ ಗ್ರಾಮ ನಮ್ಮ ರಸ್ತೆ ಯೋಜನೆ ಹಂತ - 4 | ಟಿ.ನರಸೀಪುರ | 2016-17 | ಕೆ.ಎಸ್-22-41 | ಶ್ರೀರಂಗರಾಜಪುರದ ಮೂಲಕ ಕಗ್ಗಲಿಪುರಕ್ಕೆ ಎಸ್ -3 ರಸ್ತೆ | | | | | | | 0.00 | 0.00 | 160611.00 |
| 18 | ನಮ್ಮ ಗ್ರಾಮ ನಮ್ಮ ರಸ್ತೆ ಯೋಜನೆ ಹಂತ - 4 | ಟಿ.ನರಸೀಪುರ / ವರುಣ | 2016-17 | ಕೆ.ಎಸ್-22-42 | ಬೆಳಗೆರೆಹುಂಡಿ ಯರಗನಹಳ್ಳಿ-ತಾಯೂರು | M/s STG Infrosis Pvt Ltd | 31.10.2020 | 2ನೇ ವರ್ಷದ ವಾರ್ಷಿಕ ನಿರ್ವಹಣೆ ಪ್ರಗತಿಯಲ್ಲಿದೆ | ಕಾಮಗಾರಿ ಪ್ರಗತಿಯಲ್ಲಿದೆ | ಭೌತಿಕವಾಗಿ ಪೂರ್ಣಗೊಂಡಿರುತ್ತದೆ. | 1ನೇ ವರ್ಷದ ವಾರ್ಷಿಕ ನಿರ್ವಹಣೆ ಪ್ರಗತಿಯಲ್ಲಿದೆ | 0.00 | 0.00 | 0.00 |
| 19 | ನಮ್ಮ ಗ್ರಾಮ ನಮ್ಮ ರಸ್ತೆ ಯೋಜನೆ ಹಂತ - 4 | ಟಿ.ನರಸೀಪುರ / ವರುಣ | 2016-17 | ಕೆ.ಎಸ್-22-43 | ಅಗಸ್ತ್ಯಪುರದಿಂದ ಕಂಬದರಮಣ ಬೆಟ್ಟಕ್ಕೆ | M/s STG Infrosis Pvt Ltd | 31.03.2020 | 3ನೇ ವರ್ಷದ ವಾರ್ಷಿಕ ನಿರ್ವಹಣೆ ಪ್ರಗತಿಯಲ್ಲಿದೆ | ಭೌತಿಕವಾಗಿ ಪೂರ್ಣಗೊಂಡಿರುತ್ತದೆ. | 1ನೇ ವರ್ಷದ ವಾರ್ಷಿಕ ನಿರ್ವಹಣೆ ಪ್ರಗತಿಯಲ್ಲಿದೆ | 2ನೇ ವರ್ಷದ ವಾರ್ಷಿಕ ನಿರ್ವಹಣೆ ಪ್ರಗತಿಯಲ್ಲಿದೆ | 0.00 | 0.00 | 0.00 |
| | | | | | | | | | | | ಒಟ್ಟು | 1410801.00 | 908520.00 | 2591142.00 |

## LAQ-338 ಕ್ಕೆ ಅನುಬಂಧ - 2

### ಟಿ. ನರಸೀಪುರ ವಿಧಾನ ಸಭಾ ಕ್ಷೇತ್ರದಲ್ಲಿ ಡಿಆರ್‌ಆರ್‌ಪಿ ನಕ್ಷೆಯಲ್ಲಿ ಗುರುತಿಸಲಾದ ನಾಲಾ ಸೇವಾ ರಸ್ತೆಗಳ ವಿವರ

| ಕ್ರಮ ಸಂಖ್ಯೆ | ಜಿಲ್ಲೆ | ವಿಧಾನ ಸಭಾ ಕ್ಷೇತ್ರ / ತಾಲ್ಲೂಕು | ಕಾಮಗಾರಿ ಹೆಸರು | ಉದ್ದ (ಕಿ.ಮೀಗಳಲ್ಲಿ) |
|---|---|---|---|---|
| 1 | ಮೈಸೂರು | ವರುಣ / ಟಿ.ನರಸೀಪುರ | ಈಶ್ವರಗೌಡನಹಳ್ಳಿ ಯಿಂದ ಹುಣಸೂರು ಮಾರ್ಗ ಬಿಳಿಗೆರೆಹುಂಡಿ ರಸ್ತೆ ಅಭಿವೃದ್ಧಿ ಕಾಮಗಾರಿ | 4.70 |
| 2 | ಮೈಸೂರು | ವರುಣ / ಟಿ.ನರಸೀಪುರ | ಕಿರಗಸೂರು ನಿಂದ ಹೆಳವರಹುಂಡಿ ಮಾರ್ಗ ಹುಣಸೂರು ರಸ್ತೆ ಅಭಿವೃದ್ಧಿ ಕಾಮಗಾರಿ | 4.50 |
| 3 | ಮೈಸೂರು | ಟಿ.ನರಸೀಪುರ | ಸುಜ್ಜಲೂರು - ಹೊಸೂರುಹುಂಡಿ ಯಿಂದ ಕುರುಬೂರು ಎನ್.ಹೆಚ್ ಮಾರ್ಗ ಸೈಂಟ್ ನಾರ್ ಬೆಟ್ ಪದವಿ ಪೂರ್ವ ಕಾಲೇಜು ರಸ್ತೆ ಅಭಿವೃದ್ಧಿ ಕಾಮಗಾರಿ | 5.10 |
| 4 | ಮೈಸೂರು | ಟಿ.ನರಸೀಪುರ | ತಲಕಾಡು ಯಿಂದ ಕಾವೇರಿಪುರ ಮಾರ್ಗ ಹೊಸಕುಕ್ಕೂರು ರಸ್ತೆ ಅಭಿವೃದ್ಧಿ ಕಾಮಗಾರಿ | 8.50 |
| 5 | ಮೈಸೂರು | ಟಿ.ನರಸೀಪುರ | ಗದ್ದೆಮೋಳೆಯಿಂದ ಬೆನಕನಹಳ್ಳಿ ಮಾರ್ಗ ವೈಸರಾಜಪುರ ರಸ್ತೆ ಅಭಿವೃದ್ಧಿ ಕಾಮಗಾರಿ | 4.10 |
| 6 | ಮೈಸೂರು | ಟಿ.ನರಸೀಪುರ | ಅಡಿಬೆಟ್ಟಹಳ್ಳಿ ಯಿಂದ ಮೂಗೂರು ಎನ್.ಹೆಚ್ ರಸ್ತೆ ಅಭಿವೃದ್ಧಿ ಕಾಮಗಾರಿ | 3.80 |
| 7 | ಮೈಸೂರು | ಟಿ.ನರಸೀಪುರ | ಕುರುಬೂರು ಎನ್.ಹೆಚ್ ಕಟ್ಟಾಪುರ ಮಾರ್ಗ ನಿಲಸೋಗೆ, ಹಿರಿಯೂರು, ಮಾದಪುರ ರಸ್ತೆ ಅಭಿವೃದ್ಧಿ ಕಾಮಗಾರಿ | 9.50 |
| 8 | ಮೈಸೂರು | ಟಿ.ನರಸೀಪುರ | ತುರುಗನೂರು ನಿಂದ ಎಡಹಳ್ಳಿ ಮಾರ್ಗ ಬನಗವಾಡಿ ರಸ್ತೆ ಅಭಿವೃದ್ಧಿ ಕಾಮಗಾರಿ | 3.50 |
| | | | ಒಟ್ಟು | **43.70** |

## LAQ-338 ಕ್ಕೆ ಅನುಬಂಧ - 3

### ನಮ್ಮ ಗ್ರಾಮ ನಮ್ಮ ರಸ್ತೆ ಯೋಜನೆಯಡಿ ಅಭಿವೃದ್ಧಿಪಡಿಸಲಾದ ನೀರಾವರಿ ಇಲಾಖೆಯ ನಾಲಾ ಸೇವಾ ರಸ್ತೆಗಳ ವಿವರ

| ಕ್ರಮ ಸಂಖ್ಯೆ | ವಿಧಾನ ಸಭಾ ಕ್ಷೇತ್ರ / ತಾಲ್ಲೂಕು | ನಮ್ಮ ಗ್ರಾಮ ನಮ್ಮ ರಸ್ತೆ ಯೋಜನೆ ಹಂತ | ಪ್ಯಾಕೇಜ್ ಸಂಖ್ಯೆ | ಕಾಮಗಾರಿಯ ಹೆಸರು | ರಸ್ತೆಯ ಉದ್ದ (ಕಿ.ಮೀಗಳಲ್ಲಿ) | ನಾಲಾ ರಸ್ತೆ ಅಭಿವೃದ್ಧಿಪಡಿಸಿದ ಉದ್ದ (ಕಿ.ಮೀಗಳಲ್ಲಿ) |
|---|---|---|---|---|---|---|
| 1 | ಟಿ.ನರಸೀಪುರ | ನಮ್ಮ ಗ್ರಾಮ ನಮ್ಮ ರಸ್ತೆ ಯೋಜನೆ ಹಂತ - 4 | ಕೆ.ಎಸ್-22-41 | ಕನ್ನಹಳ್ಳಿ ಮುಗೂರು ಮುಖ್ಯ ರಸ್ತೆ | 3.19 | 0.70 |
| 2 | ಟಿ.ನರಸೀಪುರ | ನಮ್ಮ ಗ್ರಾಮ ನಮ್ಮ ರಸ್ತೆ ಯೋಜನೆ ಹಂತ - 4 | ಕೆ.ಎಸ್-22-41 | ಶ್ರೀರಂಗರಾಜಪುರದ ಮೂಲಕ ಕಗ್ಗಲಿಪುರಕ್ಕೆ ಎಸ್ -3 ರಸ್ತೆ | 3.80 | 3.20 |
|  |  |  |  | ಒಟ್ಟು | 6.99 | 3.90 |

## ಕರ್ನಾಟಕ ವಿಧಾನ ಸಭೆ

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 339
2. ಸದಸ್ಯರ ಹೆಸರು : ಶ್ರೀ ಅಶ್ವಿನ್ ಕುಮಾರ್ ಎಂ.
3. ಉತ್ತರಿಸಬೇಕಾದ ದಿನಾಂಕ : 13.09.2022

| ಕ್ರ.ಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| ಅ) | ಟಿ.ನರಸೀಪುರ ವಿಧಾನಸಭಾ ಕ್ಷೇತ್ರ ವ್ಯಾಪ್ತಿಯಲ್ಲಿನ ಕಾವೇರಿ ಹಾಗೂ ಕಬಿನಿ ಜಲಾಶಯ ಯೋಜನೆಯ ಅಚ್ಚುಕಟ್ಟು ಪ್ರದೇಶದ ರಸ್ತೆಗಳು ಹಾಗೂ ನಾಲಾ ಜಾಲಗಳ ಸೇವಾ ರಸ್ತೆಗಳು ಭಾರಿ ಮಳೆಯಿಂದಾಗಿ ಹಾನಿಗೊಳಗಾಗಿದ್ದು, ರೈತರುಗಳು/ಜಾನುವಾರು, ಜಮೀನು ಗಳಿಗೆ ಹೋಗಿ ವ್ಯವಸಾಯ ಮಾಡಲು ಹಾಗೂ ಬೆಳೆ ಸಾಗಾಣಿಕೆಗೆ ತೀವ್ರ ತೊಂದರೆಯಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ದಿನಾಂಕ:31.07.2022 ರಿಂದ 11.08.2022 ರವರೆಗೆ ಮಂಡ್ಯ, ಹಾಸನ ಮತ್ತು ತುಮಕೂರು, ಜಿಲ್ಲೆಗಳಲ್ಲಿ ವಾಡಿಕೆಗಿಂತ ಹೆಚ್ಚಿನ ಪ್ರಮಾಣದ ಮಳೆಯಾಗಿದ್ದು, ಇದರಿಂದ ಮುಖ್ಯ ನಾಲೆಗಳು ಮತ್ತು ವಿತರಣಾ ನಾಲೆಗಳು, ಅಚ್ಚುಕಟ್ಟು ರಸ್ತೆಗಳು, ಮಣ್ಣು ಏರಿ, ತಡೆಗೋಡೆಗಳು, ಕೆರೆಗಳ ಏರಿಗಳು ಇತ್ಯಾದಿ ನೀರಾವರಿ ಮೂಲಸೌಕರ್ಯಗಳಿಗೆ ಹಾನಿ ಉಂಟಾಗಿದ್ದು, ಇದರಲ್ಲಿ ಟಿ.ನರಸಿಪುರ ವಿಧಾನಸಭಾ ಕ್ಷೇತ್ರದ ಒಟ್ಟು 34 ಸಂಖ್ಯೆಯ ದುರಸ್ತಿ ಕಾಮಗಾರಿಗಳಿಗಾಗಿ ರೂ.14.43 ಕೋಟಿ ಎಂದು ಅಂದಾಜಿಸಲಾಗಿದೆ.(ವಿವರಗಳನ್ನು ಅನುಬಂಧದಲ್ಲಿ ಲಗತ್ತಿಸಿದೆ)<br><br>ಮಳೆಯಿಂದ ಹಾನಿಗೊಳಗಾಗಿರುವ ಜಲಸಂಪನ್ಮೂಲ ಇಲಾಖೆಯ ಆಸ್ತಿಗಳನ್ನು ತಾತ್ಕಾಲಿಕವಾಗಿ ಪುನರ್‌ಸ್ಥಾಪಿಸುವ ಕಾಮಗಾರಿಗಳನ್ನು ಅನುಷ್ಠಾನಗೊಳಿಸಲು ದಿನಾಂಕ:29.08.2022 ರಂದು ರೂ.50.00 ಕೋಟಿ ಮೊತ್ತವನ್ನು 2022-23ನೇ ಸಾಲಿಗೆ ಕಾವೇರಿ ನೀರಾವರಿ ನಿಗಮಕ್ಕೆ ಒದಗಿಸಲಾದ ಬಂಡವಾಳ ಲೆಕ್ಕ ಶೀರ್ಷಿಕೆಯ ಅನುದಾನದಲ್ಲಿ ಭರಿಸಲು ಅನುಮೋದನೆ ನೀಡಲಾಗಿರುತ್ತದೆ.<br><br>ಅದರಂತೆ, ನೀರಾವರಿ (ದ)ವಲಯ, ಮೈಸೂರು ವಲಯಕ್ಕೆ ರೂ.17.50 ಕೋಟಿ ಅನುದಾನವನ್ನು ಹಂಚಿಕೆ ಮಾಡಲಾಗಿದ್ದು, ಮೊದಲನೇ ಹಂತದಲ್ಲಿ ಸದರಿ ಅಚ್ಚುಕಟ್ಟು ವ್ಯಾಪ್ತಿಯಲ್ಲಿ ಹಾನಿಗೊಳಗಾಗಿರುವ ಕೆರೆಗಳ ಏರಿಗಳು, ಮುಖ್ಯ ನಾಲೆಗಳ ಮತ್ತು ವಿತರಣಾ ನಾಲೆಗಳ ದುರಸ್ಥಿ, ಲೈನಿಂಗ್ ಕಾಮಗಾರಿಗಳನ್ನು ಆದ್ಯತೆ ಮೇರೆಗೆ ಕೈಗೊಂಡು ಇವುಗಳನ್ನು ಪುನರ್‌ಸ್ಥಾಪಿಸಲು ಕ್ರಮ ವಹಿಸಲಾಗುತ್ತಿದೆ. ಮುಂದುವರೆದು, ಅಚ್ಚುಕಟ್ಟು ವ್ಯಾಪ್ತಿಯಲ್ಲಿ ಹಾನಿಗೊಳಗಾಗಿರುವ ಇನ್ನಿತರೆ ರಸ್ತೆ ಕಾಮಗಾರಿಗಳನ್ನು ಅನುದಾನದ ಲಭ್ಯತೆಯ ಅನುಸಾರವಾಗಿ ಆದ್ಯತೆ ಮೇರೆಗೆ ಪುನರ್‌ಸ್ಥಾಪಿಸಲು ಪರಿಶೀಲಿಸಲಾಗುವುದು. |
| ಆ) | ಬಂದಿದ್ದಲ್ಲಿ, ಯಾವ ಅಚ್ಚುಕಟ್ಟು ರಸ್ತೆಗಳು ಹಾಗೂ ನಾಲಾ ಸೇವಾ ರಸ್ತೆಗಳನ್ನು ದುರಸ್ಥಿಗೊಳಿಸಬೇಕಾಗಿದೆ; (ರಸ್ತೆವಾರು / ಗ್ರಾಮವಾರು ವಿವರ ಒದಗಿಸುವುದು) | |
| ಇ) | ಭಾರಿ ಮಳೆಗೆ ಹಾನಿಯಾಗಿರುವ ಅಚ್ಚುಕಟ್ಟು ರಸ್ತೆಗಳು ಹಾಗೂ ನಾಲಾ ಸೇವಾ ರಸ್ತೆಗಳನ್ನು ದುರಸ್ಥಿಗೊಳಿಸಲು ಅಂದಾಜಿಸಲಾದ ಮೊತ್ತವೆಷ್ಟು; ಹಾಗೂ ಅನುದಾನವನ್ನು ಯಾವಾಗ ಬಿಡುಗಡೆ ಮಾಡಲಾಗುವುದು; (ವಿವರ ಒದಗಿಸುವುದು) | |
| ಈ) | ಭಾರಿ ಮಳೆಗೆ ಹಾನಿಯಾಗಿರುವ ಅಚ್ಚುಕಟ್ಟು ರಸ್ತೆಗಳು ಹಾಗೂ ನಾಲಾ ಸೇವಾ ರಸ್ತೆಗಳನ್ನು ಯಾವ ಕಾಲಮಿತಿಯೊಳಗೆ ದುರಸ್ಥಿಗೊಳಿಸಲು ಸರ್ಕಾರ ಯೋಜಿಸಿದೆ? (ವಿವರ ಒದಗಿಸುವುದು) | |

**ಸಂಖ್ಯೆ:ಜಸಂಇ 98 ಎನ್‌ಎಲ್‌ಎ 2022**

( ಗೋವಿಂದ ಎಂ. ಕಾರಜೋಳ )
ಜಲಸಂಪನ್ಮೂಲ ಸಚಿವರು

## ಕಾರ್ಯಕ್ರಮದ ಅಧ್ಯಕ್ಷತೆ ವಹಿಸುವ ಬಗ್ಗೆ

6 ಸರ್ಕಾರದ ಯಾವುದೇ ಕಾರ್ಯಕ್ರಮವಾಗಿದ್ದರೂ ಸಾಮಾನ್ಯವಾಗಿ ಕಾರ್ಯಕ್ರಮ ನಡೆಯುವ ಸ್ಥಳದ ವ್ಯಾಪ್ತಿಗೊಳಪಡುವ ವಿಧಾನ ಸಭಾ ಕ್ಷೇತ್ರದ ಶಾಸಕರ ಅಧ್ಯಕ್ಷತೆಯಲ್ಲಿಯೇ ಕಾರ್ಯಕ್ರಮ ನಡೆಸುವುದು. ಆದರೆ ಕೆಲವೊಂದು ಸಂದರ್ಭದಲ್ಲಿ ಒಂದು ವಿಧಾನಸಭಾ ಕ್ಷೇತ್ರದ ಸ್ಥಳೀಯ ಕಾರ್ಯಕ್ರಮವನ್ನು ಸದರಿ ವಿಧಾನಸಭಾ ಕ್ಷೇತ್ರದ ಹೋಬಳಿ/ ಪ್ರದೇಶವಿರುವ ತಾಲ್ಲೂಕಿನ ಕೇಂದ್ರ ಸ್ಥಾನದಲ್ಲಿ ಆಯೋಜಿಸಿದಾಗ, ಸದರಿ ತಾಲ್ಲೂಕು ಕೇಂದ್ರ ಸ್ಥಾನವು ಇನ್ನೊಂದು ವಿಧಾನಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿದ್ದರೂ ಸಹ ಅಂತಹ ಕಾರ್ಯಕ್ರಮಗಳಲ್ಲಿ, ಕಾರ್ಯಕ್ರಮವು ಯಾವ ವಿಧಾನಸಭಾ ಕ್ಷೇತ್ರಕ್ಕೆ ಸಂಬಂಧಪಟ್ಟಿರುತ್ತದೆಯೋ ಆ ಸಂಬಂಧಪಟ್ಟ ಶಾಸಕರು ಅಧ್ಯಕ್ಷತೆಯನ್ನು ವಹಿಸುವುದು.

7. ಕೆಲವೊಮ್ಮೆ ಕಾರಣಾಂತರಗಳಿಂದ ವಿಧಾನಸಭಾ ಸದಸ್ಯರ ಸ್ಥಾನವು ತೆರವಾದ ಸಂದರ್ಭದಲ್ಲಿ ಸರ್ಕಾರಿ ಕಾರ್ಯಕ್ರಮಗಳ ಅಧ್ಯಕ್ಷತೆಯನ್ನು ಕೆಳಕಂಡಂತೆ ವಹಿಸುವುದು.

   i. ಸರ್ಕಾರಿ ಕಾರ್ಯಕ್ರಮಗಳನ್ನು ಮಾನ್ಯ ಮುಖ್ಯ ಮಂತ್ರಿಯವರು ಉದ್ಘಾಟಿಸಿದಾಗ ಜಿಲ್ಲಾ ಸಚಿವರು ಅಧ್ಯಕ್ಷತೆಯನ್ನು ವಹಿಸುವುದು.

   ii. ಸಂಬಂಧಪಟ್ಟ ಜಿಲ್ಲಾ ಸಚಿವರು ಉದ್ಘಾಟಿಸಿದಾಗ ಇಲಾಖಾ ಸಚಿವರು ಅಧ್ಯಕ್ಷತೆಯನ್ನು ವಹಿಸುವುದು.

   iii. ಜಿಲ್ಲಾ ಸಚಿವರು ಸರ್ಕಾರಿ ಕಾರ್ಯಕ್ರಮಗಳನ್ನು ಉದ್ಘಾಟಿಸಿದಾಗ, ಇಲಾಖಾ ಸಚಿವರು ಹಾಜರಾಗದೇ ಇರುವ ಸಂದರ್ಭಗಳಲ್ಲಿ, ಜಿಲ್ಲಾ ಸಚಿವರೇ ಅಧ್ಯಕ್ಷತೆಯನ್ನು ಸಹ ವಹಿಸುವುದು.

## ಕಾರ್ಯಕ್ರಮಕ್ಕೆ ಆಹ್ವಾನಿಸುವ ಬಗ್ಗೆ

8 ಕಾರ್ಯಕ್ರಮಕ್ಕನುಗುಣವಾಗಿ ಈ ಕೆಳಕಂಡಂತೆ ಜನಪ್ರತಿನಿಧಿಗಳನ್ನು ಕಡ್ಡಾಯವಾಗಿ ಆಹ್ವಾನಿಸಬೇಕೆಂದು ಸೂಚಿಸಿದೆ.

**ತಾಲ್ಲೂಕು ಮಟ್ಟದ ಕಾರ್ಯಕ್ರಮ:**

- ಜಿಲ್ಲಾ ಉಸ್ತುವಾರಿ ಸಚಿವರುಗಳು,
- ಕಾರ್ಯಕ್ರಮಕ್ಕೆ ಸಂಬಂಧಪಟ್ಟ ಇಲಾಖಾ ಸಚಿವರು.
- ಸಂಬಂಧಪಟ್ಟ ಕ್ಷೇತ್ರದ ವಿಧಾನ ಸಭಾ ಕ್ಷೇತ್ರದ ಶಾಸಕರು (ಅಧ್ಯಕ್ಷತೆ)
- ತಾಲ್ಲೂಕನ್ನು ಪ್ರತಿನಿಧಿಸುವ ಸಂಸದರು (ಆ ಜಿಲ್ಲೆಯನ್ನು ಆಯ್ಕೆ ಮಾಡಿಕೊಂಡಿರುವ ರಾಜ್ಯಸಭಾ ಸದಸ್ಯರು ಸೇರಿದಂತೆ).

- ತಾಲ್ಲೂಕನ್ನು ಪ್ರತಿನಿಧಿಸುವ ಪದವೀದರ ಕ್ಷೇತ್ರ, ಶಿಕ್ಷಕರ ಕ್ಷೇತ್ರ ಮತ್ತು ಸ್ಥಳೀಯ ಸಂಸ್ಥೆಗಳ ಕ್ಷೇತ್ರದ ವಿಧಾನ ಪರಿಷತ್ತಿನ ಎಲ್ಲಾ ಶಾಸಕರುಗಳು ಮತ್ತು ನೋಡಲ್ ತಾಲ್ಲೂಕಾಗಿ ಆಯ್ಕೆ ಮಾಡಿಕೊಂಡಿರುವ ನಾಮ ನಿರ್ದೇಶಿತ ಹಾಗೂ ವಿಧಾನಸಭೆಯಿಂದ ಆಯ್ಕೆಯಾದ ವಿಧಾನ ಪರಿಷತ್ತಿನ ಶಾಸಕರುಗಳು.
- ನಿಗಮ ಮತ್ತು ಮಂಡಳಿಗಳ ಕಾರ್ಯಕ್ರಮಗಳಿಗೆ ಆಯಾ ನಿಗಮ ಮತ್ತು ಮಂಡಳಿಯ ಅಧ್ಯಕ್ಷರುಗಳನ್ನು ಆಹ್ವಾನಿಸುವುದು. ಜೊತೆಗೆ ಇತರೇ ಕಾರ್ಯಕ್ರಮಗಳಿಗೆ ಆಯಾ ತಾಲ್ಲೂಕುಗಳಿಂದ ನಿಗಮ ಮತ್ತು ಮಂಡಳಿಗಳಿಗೆ ಅಧ್ಯಕ್ಷರುಗಳಾಗಿರುವವರನ್ನು ಸಹ ಆಹ್ವಾನಿಸುವುದು.
- ಜಿಲ್ಲಾ ಪಂಚಾಯತ್ ಅಧ್ಯಕ್ಷರು
- ತಾಲ್ಲೂಕು ಪಂಚಾಯತ್ ಅಧ್ಯಕ್ಷರು
- ಕಾರ್ಯಕ್ರಮ ನಡೆಯುವ ಸ್ಥಳದ ನಗರ ಸ್ಥಳೀಯ ಸಂಸ್ಥೆಯ ಅಧ್ಯಕ್ಷರು/ ಮಹಾಪೌರರು ಅಥವಾ ಗ್ರಾಮ ಪಂಚಾಯಿತಿಯ ಅಧ್ಯಕ್ಷರು.

<u>ಜಿಲ್ಲಾ ಮಟ್ಟದ ಕಾರ್ಯಕ್ರಮ:</u>

- ಜಿಲ್ಲಾ ಉಸ್ತುವಾರಿ ಸಚಿವರುಗಳು.
- ಜಿಲ್ಲೆಯ ಇತರೆ ಸಚಿವರುಗಳು.
- ಕಾರ್ಯಕ್ರಮಕ್ಕೆ ಸಂಬಂಧಪಟ್ಟ ಇಲಾಖಾ ಸಚಿವರು.
- ಜಿಲ್ಲೆಯ ಎಲ್ಲಾ ವಿಧಾನ ಸಭಾ ಸದಸ್ಯರುಗಳು (ಕಾರ್ಯಕ್ರಮ ನಡೆಯುವ ಸ್ಥಳದ ವ್ಯಾಪ್ತಿಯ ಶಾಸಕರ ಅಧ್ಯಕ್ಷತೆ.
- ಜಿಲ್ಲೆಯ ಎಲ್ಲಾ ಸಂಸದರು (ಜಿಲ್ಲೆಯನ್ನು ನೋಡಲ್ ಜಿಲ್ಲೆಯನ್ನಾಗಿ ಆಯ್ಕೆ ಮಾಡಿಕೊಂಡಿರುವ ರಾಜ್ಯ ಸಭಾ ಸದಸ್ಯರು ಸೇರಿದಂತೆ)
- ಜಿಲ್ಲೆಯನ್ನು ಪ್ರತಿನಿಧಿಸುವ ಪದವೀದರ ಕ್ಷೇತ್ರ, ಶಿಕ್ಷಕರ ಕ್ಷೇತ್ರ ಮತ್ತು ಸ್ಥಳೀಯ ಸಂಸ್ಥೆಗಳ ಕ್ಷೇತ್ರಗಳಿಂದ ಚುನಾಯಿತರಾಗಿರುವ ವಿಧಾನ ಪರಿಷತ್ತಿನ ಎಲ್ಲಾ ಶಾಸಕರುಗಳು ಮತ್ತು ನೋಡಲ್ ಜಿಲ್ಲೆಯಾಗಿ ಆಯ್ಕೆ ಮಾಡಿಕೊಂಡಿರುವ ನಾಮ ನಿರ್ದೇಶಿತ ಹಾಗೂ ವಿಧಾನಸಭೆಯಿಂದ ಆಯ್ಕೆಯಾದ ವಿಧಾನ ಪರಿಷತ್ತಿನ ಶಾಸಕರುಗಳು
- ನಿಗಮ ಮತ್ತು ಮಂಡಳಿಗಳ ಕಾರ್ಯಕ್ರಮಗಳಿಗೆ ಆಯಾ ನಿಗಮ ಮತ್ತು ಮಂಡಳಿಯ ಅಧ್ಯಕ್ಷರುಗಳನ್ನು ಆಹ್ವಾನಿಸುವುದು. ಜೊತೆಗೆ ಇತರೇ ಕಾರ್ಯಕ್ರಮಗಳಿಗೆ ಆಯಾ ಜಿಲ್ಲೆಗಳಿಂದ ನಿಗಮ ಮತ್ತು ಮಂಡಳಿಗಳಿಗೆ ಅಧ್ಯಕ್ಷರುಗಳಾಗಿರುವವರನ್ನು ಸಹ ಆಹ್ವಾವಿಸುವುದು.
- ಜಿಲ್ಲಾ ಪಂಚಾಯತ್ ಅಧ್ಯಕ್ಷರು.
- ಕಾರ್ಯಕ್ರಮ ನಡೆಯುವ ಸ್ಥಳದ ತಾಲ್ಲೂಕು ಪಂಚಾಯತ್ ಅಧ್ಯಕ್ಷರು
- ಕಾರ್ಯಕ್ರಮ ನಡೆಯುವ ಸ್ಥಳದ ನಗರ ಸ್ಥಳೀಯ ಸಂಸ್ಥೆಯ ಅಧ್ಯಕ್ಷರು/ ಮಹಾಪೌರರು ಅಥವಾ ಗ್ರಾಮ ಪಂಚಾಯಿತಿಯ ಅಧ್ಯಕ್ಷರು.

ರಾಜ್ಯ ಮಟ್ಟದ ಕಾರ್ಯಕ್ರಮ:

- ಮಾನ್ಯ ಮುಖ್ಯಮಂತ್ರಿಗಳು,
- ಉಪ ಮುಖ್ಯಮಂತ್ರಿಗಳು.
- ಕಾರ್ಯಕ್ರಮ ನಡೆಯುವ ಸ್ಥಳದ ಜಿಲ್ಲೆಯ ಜಿಲ್ಲಾ ಉಸ್ತುವಾರಿ ಸಚಿವರು.
- ಕಾರ್ಯಕ್ರಮ ನಡೆಯುವ ಸ್ಥಳದ ಜಿಲ್ಲೆಯ ಇತರೆ ಸಚಿವರು
- ಕಾರ್ಯಕ್ರಮಕ್ಕೆ ಸಂಬಂಧಪಟ್ಟ ಇಲಾಖಾ ಸಚಿವರು,
- ವಿರೋಧ ಪಕ್ಷದ ನಾಯಕರು,
- ಕಾರ್ಯಕ್ರಮ ನಡೆಯುವ ಜಿಲ್ಲೆಯ ಸಂಸದರು (ಜಿಲ್ಲೆಯನ್ನು ನೋಡಲ್ ಜಿಲ್ಲೆಯನ್ನಾಗಿ ಆಯ್ಕೆ ಮಾಡಿಕೊಂಡಿರುವ ರಾಜ್ಯ ಸಭಾ ಸದಸ್ಯರು ಸೇರಿದಂತೆ).
- ಕಾರ್ಯಕ್ರಮ ಜರುಗುವ ಜಿಲ್ಲೆಯಲ್ಲಿನ ಎಲ್ಲಾ ಶಾಸಕರು (ಕಾರ್ಯಕ್ರಮ ನಡೆಯುವ ಸ್ಥಳದ ವ್ಯಾಪ್ತಿಯ ಶಾಸಕರ ಅಧ್ಯಕ್ಷತೆ).
- ಕಾರ್ಯಕ್ರಮದ ನಡೆಯುವ ಜಿಲ್ಲೆಯ ಪ್ರತಿನಿಧಿಸುವ ಪದವೀದರ ಕ್ಷೇತ್ರ, ಶಿಕ್ಷಕರ ಕ್ಷೇತ್ರ ಮತ್ತು ಸ್ಥಳೀಯ ಸಂಸ್ಥೆಗಳ ಕ್ಷೇತ್ರಗಳಿಂದ ಚುನಾಯಿತರಾಗಿರುವ ವಿಧಾನ ಪರಿಷತ್ತಿನ ಎಲ್ಲಾ ಶಾಸಕರುಗಳು ಮತ್ತು ನೋಡಲ್ ಜಿಲ್ಲೆಯಾಗಿ ಆಯ್ಕೆ ಮಾಡಿಕೊಂಡಿರುವ ನಾಮ ನಿರ್ದೇಶಿತ ಹಾಗೂ ವಿಧಾನಸಭೆಯಿಂದ ಆಯ್ಕೆಯಾದ ವಿಧಾನ ಪರಿಷತ್ತಿನ ಶಾಸಕರುಗಳು.
- ನಿಗಮ ಮತ್ತು ಮಂಡಳಿಗಳ ಕಾರ್ಯಕ್ರಮಗಳಿಗೆ ಆಯಾ ನಿಗಮ ಮತ್ತು ಮಂಡಳಿಯ ಅಧ್ಯಕ್ಷರುಗಳನ್ನು ಆಹ್ವಾನಿಸುವುದು. ಜೊತೆಗೆ ಇತರೇ ಕಾರ್ಯಕ್ರಮಗಳಿಗೆ ಆಯಾ ಜಿಲ್ಲೆಗಳಿಂದ ನಿಗಮ ಮತ್ತು ಮಂಡಳಿಗಳಿಗೆ ಅಧ್ಯಕ್ಷರುಗಳಾಗಿರುವವರನ್ನು ಸಹ ಆಹ್ವಾನಿಸುವುದು.
- ಕಾರ್ಯಕ್ರಮ ನಡೆಯುವ ಸ್ಥಳದ ಜಿಲ್ಲಾ ಪಂಚಾಯತ್ ಅಧ್ಯಕ್ಷರು.
- ಕಾರ್ಯಕ್ರಮ ನಡೆಯುವ ಸ್ಥಳದ ತಾಲ್ಲೂಕು ಪಂಚಾಯತ್ ಅಧ್ಯಕ್ಷರು
- ಕಾರ್ಯಕ್ರಮ ನಡೆಯುವ ಸ್ಥಳದ ನಗರ ಸ್ಥಳೀಯ ಸಂಸ್ಥೆಯ ಅಧ್ಯಕ್ಷರು/ ಮಹಾಪೌರರು ಅಥವಾ ಗ್ರಾಮ ಪಂಚಾಯಿತಿಯ ಅಧ್ಯಕ್ಷರು.

9. ಕಂಡಿಕೆ 8ರಲ್ಲಿ ನಮೂದಿಸಿದ ಜನಪ್ರತಿನಿಧಿ/ ಗಣ್ಯ ವ್ಯಕ್ತಿಗಳೊಂದಿಗೆ ಜಿಲ್ಲಾ ಪಂಚಾಯತ್, ತಾಲ್ಲೂಕು ಪಂಚಾಯತ್, ಗ್ರಾಮ ಪಂಚಾಯತ್ ಕಾರ್ಯಕ್ರಮಗಳಿಗೆ ಸಂಬಂಧಿಸಿದಂತೆ ಸಂದರ್ಭಗನುಗುಣವಾಗಿ ಈ ಕೆಳಕಂಡ ಜನಪ್ರತಿನಿಧಿಗಳನ್ನು ಸಹ ಆಹ್ವಾನಿಸತಕ್ಕದ್ದು.

(ಎ) ಜಿಲ್ಲಾ ಪಂಚಾಯತ್‌ಗೆ ಸಂಬಂಧಪಟ್ಟಂತಹ ಕಾರ್ಯಕ್ರಮಗಳಿಗೆ ಜಿಲ್ಲಾ ಪಂಚಾಯತ್‌ನ ಅಧ್ಯಕ್ಷರು, ಉಪಾಧ್ಯಕ್ಷರು ಮತ್ತು ಜಿಲ್ಲಾ ಪಂಚಾಯತ್ ಸದಸ್ಯರುಗಳನ್ನು ಆಹ್ವಾನಿಸುವುದು.

(ಬಿ) ಅದರಂತೆ ತಾಲ್ಲೂಕು ಪಂಚಾಯತ್‌ಗೆ ಸಂಬಂಧಪಟ್ಟಂತಹ ಕಾರ್ಯಕ್ರಮಗಳಿಗೆ ತಾಲ್ಲೂಕು ಪಂಚಾಯತ್‌ನ ಅಧ್ಯಕ್ಷರು, ಉಪಾಧ್ಯಕ್ಷರು ಮತ್ತು ತಾಲ್ಲೂಕು ಪಂಚಾಯತ್ ಸದಸ್ಯರುಗಳನ್ನು ಆಹ್ವಾನಿಸುವುದು.

(ಸಿ) ಅದರಂತೆ ಗ್ರಾಮ ಪಂಚಾಯತ್‌ಗೆ ಸಂಬಂಧಪಟ್ಟಂತಹ ಕಾರ್ಯಕ್ರಮಗಳಿಗೆ ಗ್ರಾಮ ಪಂಚಾಯತ್‌ನ ಅಧ್ಯಕ್ಷರು, ಉಪಾಧ್ಯಕ್ಷರು ಮತ್ತು ಗ್ರಾಮ ಪಂಚಾಯತ್ ಸದಸ್ಯರುಗಳನ್ನು ಆಹ್ವಾನಿಸುವುದು.

(ಡಿ) ಅದರಂತೆ ನಗರ ಸ್ಥಳೀಯ ಸಂಸ್ಥೆಗಳಿಗೆ ಸಂಬಂಧಪಟ್ಟಂತಹ ಕಾರ್ಯಕ್ರಮಗಳಿಗೆ ಸಂಬಂಧಪಟ್ಟ ನಗರ ಸ್ಥಳೀಯ ಸಂಸ್ಥೆಯ ಅಧ್ಯಕ್ಷರು, ಉಪಾಧ್ಯಕ್ಷರು ಮತ್ತು ನಗರ ಸ್ಥಳೀಯ ಸಂಸ್ಥೆಯ ಸದಸ್ಯರುಗಳನ್ನು ಆಹ್ವಾನಿಸುವುದು.

ಟಿಪ್ಪಣಿ:

ಮೇಲ್ಕಂಡ ಕಾರ್ಯಕ್ರಮಗಳಿಗೆ ಕಡ್ಡಾಯವಾಗಿ ಆಹ್ವಾನಿಸಬೇಕಾಗಿರುವ ಜನಪ್ರತಿನಿಧಿಗಳನ್ನು ಹೊರತುಪಡಿಸಿ, ಇತರೆ ಸಚಿವರು/ ಜನಪ್ರತಿನಿಧಿಗಳು/ ಗಣ್ಯ ವ್ಯಕ್ತಿಗಳನ್ನು ಆಹ್ವಾನಿಸಲು ಕಾರ್ಯಕ್ರಮದ ಸಂದರ್ಭಕ್ಕನುಗುಣವಾಗಿ ಆಯೋಜಕರು ತೀರ್ಮಾನ ತೆಗೆದುಕೊಳ್ಳತಕ್ಕದ್ದು.

## ಆಹ್ವಾನ ಪತ್ರಿಕೆ ಮುದ್ರಿಸುವ ಬಗ್ಗೆ :

10. ಸಮಾರಂಭದಲ್ಲಿ ಪಾಲ್ಗೊಳ್ಳುವಂತಹ ಸಂದರ್ಭ, ರಾಜ್ಯ ಆದ್ಯತಾ ಸೂಚಿ ಪಟ್ಟಿ ಮತ್ತು ಇತರೆ ಸನ್ನಿವೇಶಗಳನ್ನು ಆದರಿಸಿ ಕೇಂದ್ರ ಸಚಿವರುಗಳು, ರಾಜ್ಯ ಸಂಪುಟ ದರ್ಜೆ ಸಚಿವರುಗಳು, ರಾಜ್ಯ ಸಚಿವರು, ಸಂಸತ್ ಮತ್ತು ರಾಜ್ಯ ವಿಧಾನ ಮಂಡಲಗಳ ಸದಸ್ಯರುಗಳಿಗೆ, ಘನ ಉಪಸ್ಥಿತಿ, ಉದ್ಘಾಟನೆ/ ಶಂಕುಸ್ಥಾಪನೆ/ಲೋಕಾರ್ಪಣೆ, ಅಧ್ಯಕ್ಷರು, ಮುಖ್ಯ ಅತಿಥಿಗಳು, ವಿಶೇಷ ಆಹ್ವಾನಿತರು ಹೀಗೆ ಸ್ಥಾನಗಳನ್ನು ನೀಡಬೇಕು. ಇದೇ ಅನುಕ್ರಮದಲ್ಲಿ ಆಹ್ವಾನ ಪತ್ರಿಕೆಯನ್ನು ಮುದ್ರಿಸತಕ್ಕದ್ದು.

11. ಸರ್ಕಾರದ ಕಾರ್ಯಕ್ರಮದ ಎಲ್ಲಾ ಆಹ್ವಾನ ಪತ್ರಿಕೆಗಳಲ್ಲಿ ಆಹ್ವಾನಿತರ ಹೆಸರುಗಳನ್ನು ರಾಜ್ಯ ಆದ್ಯತಾ ಸೂಚಿಪಟ್ಟಿಗೆ ಅನುಗುಣವಾಗಿಯೇ ಮುದ್ರಿಸಬೇಕು. ಈ ಆದ್ಯತಾಸೂಚಿ ಪಟ್ಟಿಯನ್ನು ಪರಿಗಣಿಸುವಾಗ ಜನಪ್ರತಿನಿಧಿಗಳು ಹೊಂದಿರುವ ಸ್ಥಾನಮಾನವನ್ನು ಪರಿಗಣನೆಗೆ ತೆಗೆದುಕೊಳ್ಳಬೇಕು. ಆದರೆ, ರಾಜ್ಯ ಆದ್ಯತಾ ಸೂಚಿ ಪಟ್ಟಿಯ ಟಿಪ್ಪಣಿ 6(ಎ) ರಲ್ಲಿ ತಿಳಿಸಿರುವಂತೆ ಕಾರ್ಯಕ್ರಮದ ಅಧ್ಯಕ್ಷ ಸ್ಥಾನವನ್ನು ಆಹ್ವಾನ ಪತ್ರಿಕೆಯಲ್ಲಿ ಘನ ಉಪಸ್ಥಿತಿ, ಉದ್ಘಾಟನೆ/ ಶಂಕುಸ್ಥಾಪನೆ/ಲೋಕಾರ್ಪಣೆಯ ನಂತರ ನಮೂದಿಸುವುದು.

ಟಿಪ್ಪಣಿ

**ಅ) ಸರ್ಕಾರದ ಕಾರ್ಯಕ್ರಮಗಳಿಗೆ ಕಡ್ಡಾಯವಾಗಿ ಆಹ್ವಾನಿಸಬೇಕಾದ ಮತ್ತು ಕರ್ನಾಟಕ ರಾಜ್ಯದ ಆದ್ಯತಾ ಸೂಚಿ ಪಟ್ಟಿಯಲ್ಲಿ ಯಾವುದೇ ಸ್ಥಾನಮಾನವನ್ನು ಹೊಂದದೇ ಇರುವ ಜನಪ್ರತಿನಿಧಿಗಳನ್ನು/ಗಣ್ಯ ವ್ಯಕ್ತಿಗಳನ್ನು ಆಹ್ವಾನ ಪತ್ರಿಕೆಯಲ್ಲಿ ಕೊನೆಯ ಶಾಸಕರ ನಂತರ ಈ ಕೆಳಗಿನ ಆದ್ಯತೆಯಂತೆ ನಮೂದಿಸಲು ಕ್ರಮಕೈಗೊಳ್ಳತಕ್ಕದ್ದು.**

i. **ಶಾಸಕರಲ್ಲದ ಮತ್ತು ಸಚಿವ ಸ್ಥಾನಮಾನ ಹೊಂದದೇ ಇರುವ ರಾಜ್ಯ ಮಟ್ಟದ ಇತರೆ ನಿಗಮ ಮತ್ತು ಮಂಡಳಿಗಳ ಅಧ್ಯಕ್ಷರುಗಳು.**

- ಒಂದಕ್ಕಿಂತ ಹೆಚ್ಚಿಗೆ ನಿಗಮ ಮತ್ತು ಮಂಡಳಿಗಳ ಅಧ್ಯಕ್ಷರುಗಳು ಇದ್ದಲ್ಲಿ, ಆಯಾ ಅಧ್ಯಕ್ಷರುಗಳು ಆ ಹುದ್ದೆಗೆ ಸೇರಿದ ದಿನಾಂಕವನ್ನು ಪರಿಗಣನೆಗೆ ತೆಗೆದುಕೊಂಡು ಪರಸ್ಪರ ಆದ್ಯತೆ ನಿಗದಿಪಡಿಸುವುದು.

ii. ಕಾರ್ಯಕ್ರಮ ನಡೆಯುವ ಸ್ಥಳದ ಮಹಾನಗರಪಾಲಿಕೆಯ ಮಹಾಪೌರರು.

iii. ಕಾರ್ಯಕ್ರಮ ನಡೆಯುವ ಸ್ಥಳದ ತಾಲ್ಲೂಕ್ ಪಂಚಾಯತ್ ಅಧ್ಯಕ್ಷರು..

iv. ಕಾರ್ಯಕ್ರಮ ನಡೆಯುವ ಸ್ಥಳದ ನಗರ ಸ್ಥಳೀಯ ಸಂಸ್ಥೆಯ/ಗ್ರಾಮ ಪಂಚಾಯತಿನ ಅಧ್ಯಕ್ಷರು.

ಆ) ಸರ್ಕಾರದ ಕಾರ್ಯಕ್ರಮಗಳಿಗೆ ಕಡ್ಡಾಯವಾಗಿ ಅಹ್ವಾನಿಸಬೇಕಾದ ಜನಪ್ರತಿನಿಧಿಗಳನ್ನು ಹೊರತುಪಡಿಸಿ ಇತರೆ ಜನಪ್ರತಿನಿಧಿಗಳನ್ನು ಮತ್ತು ಗಣ್ಯವ್ಯಕ್ತಿಗಳನ್ನು ಅಹ್ವಾನಿಸಿದಾಗ,

i. ಈಗಾಗಲೇ ಅವರಿಗೆ ಕರ್ನಾಟಕ ರಾಜ್ಯದ ಆದ್ಯತಾ ಸೂಚಿಪಟ್ಟಿಯಲ್ಲಿ ಸ್ಥಾನಮಾನ ನೀಡಿದ್ದರೆ ಅವರ ಹೆಸರುಗಳನ್ನು ಆ ಪ್ರಕಾರ ಆಹ್ವಾನ ಪತ್ರಿಕೆಗಳಲ್ಲಿ ನಮೂದಿಸಿವುದು.

ii. ಅವರಿಗೆ ಯಾವುದೇ ಸ್ಥಾನಮಾನವಿಲ್ಲದಿದ್ದಾಗ ಅವರ ಹೆಸರುಗಳನ್ನು ಕಡ್ಡಾಯವಾಗಿ ಅಹ್ವಾನಿಸಬೇಕಾದ ಎಲ್ಲಾ ಜನಪ್ರತಿನಿಧಿಗಳ ನಂತರ ಅವರ ಹೆಸರುಗಳನ್ನು ನಮೂದಿಸುವುದು.

12. 2018 ರ ಆದ್ಯತಾ ಸೂಚಿಪಟ್ಟಿಯ ಪ್ರಕಾರ ಲೋಕಸಭಾ ಸದಸ್ಯರು ಮತ್ತು ರಾಜ್ಯಸಭಾ ಸದಸ್ಯರು ಕ್ರಮ ಸಂಖ್ಯೆ:21 ಅನುಚ್ಛೇದದಲ್ಲಿ ಹಾಗೂ ವಿಧಾನಸಭಾ ಸದಸ್ಯರು ಮತ್ತು ವಿಧಾನ ಪರಿಷತ್ ಸದಸ್ಯರುಗಳು ಕ್ರಮ ಸಂಖ್ಯೆ:21 (ಎ) ಅನುಚ್ಛೇದದಲ್ಲಿ ಸ್ಥಾನವನ್ನು ಪಡೆಯುತ್ತಾರೆ. ಭಾರತ ಸರ್ಕಾರದ ಗೃಹ ಮಂತ್ರಾಲಯವು "as per the practice the person who has served more than one term continuously are placed higher in the Table of Precedence (ToP)" ಎಂದು ಅಭಿಪ್ರಾಯಿಸಿರುವ ಹಿನ್ನೆಲೆಯಲ್ಲಿ ಆದ್ಯತಾಸೂಚಿ ಪಟ್ಟಿಯಲ್ಲಿ ಒಂದೇ ಅನುಚ್ಛೇದದಲ್ಲಿರುವ ಹುದ್ದೆಗಳ ನಡುವೆ ಆದ್ಯತೆ ನೀಡುವಾಗ ಲೋಕಸಭಾ ಸದಸ್ಯರ ನಂತರ ರಾಜ್ಯಸಭಾ ಸದಸ್ಯರು ಹಾಗೂ ವಿಧಾನ ಸಭಾ ಸದಸ್ಯರ ನಂತರ ವಿಧಾನ ಪರಿಷತ್ತು ಸದಸ್ಯರು ಎಂಬ ಎರಡು ವಿಂಗಡನೆಗಳಾಗಿ ಮಾಡಿಕೊಳ್ಳದೇ ಯಾವ ವ್ಯಕ್ತಿಗಳು ಒಂದಕ್ಕಿಂತ ಹೆಚ್ಚು ಅವಧಿಗೆ ಸತತವಾಗಿ ಅದೇ ಸ್ಥಾನದಲ್ಲಿ ಮುಂದುವರೆದಿರುತ್ತಾರೋ ಅಂತಹವರಿಗೆ ಪರಸ್ಪರ ಆದ್ಯತೆಯನ್ನು ನಿಗದಿಪಡಿಸುವಾಗ ಮೇಲಿನ ಸ್ಥಾನವನ್ನು ನಿಗದಿಪಡಿಸುವುದು.

ಟಿಪ್ಪಣಿ

ಜಿಲ್ಲಾ ಮಟ್ಟದ ಹಾಗೂ ರಾಜ್ಯ ಮಟ್ಟದ ಕಾರ್ಯಕ್ರಮಗಳಿಗೆ ಸಂಬಂಧಿಸಿದಂತೆ, ಕಾರ್ಯಕ್ರಮ ನಡೆಯುವ ಸ್ಥಳದ ಲೋಕಸಭಾ ಕ್ಷೇತ್ರವನ್ನು ಪ್ರತಿನಿಧಿಸುವ ಸಂಸದರನ್ನು ಮೊದಲಿಗೆ ಹಾಕುವುದು. ತದನಂತರ ಉಳಿದ ಸಂಸದರುಗಳನ್ನು (ಲೋಕಸಭಾ ಮತ್ತು ರಾಜ್ಯ ಸಭಾ ಸಂಸದರನ್ನೊಳಗೊಂಡಂತೆ) ಆದ್ಯತಾ ಪಟ್ಟಿಯ ಪ್ರಕಾರ ನಮೂದು ಮಾಡುವುದು.

13. ಸರ್ಕಾರದ ಸಮಾರಂಭಗಳ ಆಮಂತ್ರಣ ಪತ್ರಿಕೆಯಲ್ಲಿ ವಿಧಾನ ಪರಿಷತ್ತು ಮತ್ತು ವಿಧಾನ ಸಭೆಯ ಸದಸ್ಯರ ಹೆಸರುಗಳನ್ನು ನಮೂದು ಮಾಡುವ ಸಂದರ್ಭಗಳಲ್ಲಿ "ಶಾಸಕರು (ವಿಧಾನ ಪರಿಷತ್ತು) ಮತ್ತು ಶಾಸಕರು (ವಿಧಾನ ಸಭೆ) ಎಂದು ಹಾಗೂ ಲೋಕಸಭಾ ಸದಸ್ಯರ ಮತ್ತು ರಾಜ್ಯಸಭಾ ಸದಸ್ಯರ ಹೆಸರುಗಳನ್ನು ನಮೂದು ಮಾಡುವ ಸಂದರ್ಭಗಳಲ್ಲಿ ಸಂಸದರು ( ಲೋಕಸಭೆ) ಮತ್ತು ಸಂಸದರು (ರಾಜ್ಯಸಭೆ) ಎಂದು ನಮೂದು ಮಾಡುವುದು.

14. ಜಿಲ್ಲೆಯಲ್ಲಿ ಯಾವುದೇ ಸರ್ಕಾರಿ ಸಮಾರಂಭ ಏರ್ಪಡಿಸುವ ಮುನ್ನ ಆಹ್ವಾನ ಪತ್ರಿಕೆಗೆ ಆಯಾ ಜಿಲ್ಲಾಧಿಕಾರಿಗಳ / ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳ ಅನುಮೋದನೆ ಪಡೆಯಬೇಕು

15. ಸರ್ಕಾರದ ಸಮಾರಂಭವನ್ನು ಏರ್ಪಡಿಸುವ ಎಲ್ಲಾ ಇಲಾಖಾ ಮುಖ್ಯಸ್ಥರು ಮತ್ತು ಜಿಲ್ಲಾಧಿಕಾರಿಗಳು ಸಂಸತ್ತಿನ ಹಾಗೂ ರಾಜ್ಯ ವಿಧಾನ ಮಂಡಲದ ಸದಸ್ಯರುಗಳಿಗೆ ತಪ್ಪದೇ ಆಹ್ವಾನ ಪತ್ರಿಕೆಗಳನ್ನು ಕಳುಹಿಸುವ ವ್ಯವಸ್ಥೆ ಮಾಡತಕ್ಕದ್ದಲ್ಲದೇ, ಇಲಾಖೆಯ ಹಿರಿಯ ಅಧಿಕಾರಿಗಳ ಮುಖಾಂತರ ಅವರುಗಳಿಗೆ ಆಹ್ವಾನ ಪತ್ರಿಕೆಗಳನ್ನು ಖುದ್ದಾಗಿ ತಲುಪಿಸಲು ಏರ್ಪಾಡು ಮಾಡಬೇಕು.

16 ಆಹ್ವಾನ ಪತ್ರಿಕೆಗಳನ್ನು ಮುದ್ರಿಸದಿದ್ದ ಪಕ್ಷದಲ್ಲಿ ಕನಿಷ್ಠ ಪಕ್ಷ ಪತ್ರದ ಮುಖೇನ ಅನೌಪಚಾರಿಕವಾಗಿ ಜವಾಬ್ದಾರಿಯುತ ಅಧಿಕಾರಿಗಳ ಮುಖಾಂತರ ಸಂಸತ್ ಸದಸ್ಯರುಗಳನ್ನು ರಾಜ್ಯ ವಿಧಾನ ಮಂಡಲದ ಸದಸ್ಯರನ್ನು ಹಾಗೂ ಇತರರನ್ನು ಸಮಾರಂಭಕ್ಕೆ ಆಹ್ವಾನಿಸಬೇಕು.

17 ಶಂಕುಸ್ಥಾಪನೆ / ಉದ್ಘಾಟನೆ ಇತ್ಯಾದಿಗಳಿಗೆ ಸಂಬಂಧಪಟ್ಟ ಶಿಲೆಗಳಲ್ಲೂ ಸಹ ಆಹ್ವಾನ ಪತ್ರಿಕೆಯಲ್ಲಿರುವ ಹೆಸರುಗಳನ್ನು ಅದೇ ಆದ್ಯತೆಯಲ್ಲಿ ನಮೂದಿಸಬೇಕು.

---

## ಆಸನ ವ್ಯವಸ್ಥೆ

18. ಆಸನ ವ್ಯವಸ್ಥೆ ಮಾಡುವಾಗಲೂ ರಾಜ್ಯ ಆಧ್ಯತಾ ಪಟ್ಟಿಯ ಪ್ರಕಾರವೇ ಗಣ್ಯರಿಗೆ ಸಲ್ಲಬೇಕಾದ ಸ್ಥಾನಮಾನಗಳನ್ನು ಆಯಾ ವರಿಷ್ಟರಿಗೆ ತಪ್ಪದೇ ಸಲ್ಲಿಸಬೇಕು. ಆದ್ದರಿಂದ ಆಹ್ವಾನ ಪತ್ರಿಕೆಯನ್ನು ಆದ್ಯತಾಪಟ್ಟಿಯ ಮೇರೆಗೆ ಮುದ್ರಿಸುವುದರಿಂದ ಆಸನ ವ್ಯವಸ್ಥೆಯನ್ನು ಆಹ್ವಾನ ಪತ್ರಿಕೆಯ ಅನುಗುಣವಾಗಿ ಮಾಡುವುದು.

19 ಸಾಮಾನ್ಯವಾಗಿ ಶಿಷ್ಟಾಚಾರದಂತೆ ಅನುಸರಿಸಬೇಕಾದ ಆಸನ ವ್ಯವಸ್ಥೆಯನ್ನು ಕೆಳಕಂಡಂತೆ ನೀಡಲಾಗಿದೆ.

| 10 | 8 | 6 | 4 | 2 | 1 | 3 | 5 | 7 | 9 | 11 |
|---|---|---|---|---|---|---|---|---|---|---|

ಮೇಲ್ಕಂಡಂತೆ ಕಾರ್ಯಕ್ರಮದ ಆಹ್ವಾನ ಪತ್ರಿಕೆಯ ಪ್ರಕಾರ ಮೊದಲಿಗರೋ ಯಾರೋ ಅವರನ್ನು ಮಧ್ಯದಲ್ಲಿ (ಆಸನ ಸಂಖ್ಯೆ: 1) ಕೂರಿಸಬೇಕು ಅವರ ನಂತರ ಆಹ್ವಾನ ಪತ್ರಿಕೆಯ ಅನುಗುಣವಾಗಿ ಉಳಿದ ಗಣ್ಯರನ್ನು ಬಲ ಮತ್ತು ಎಡ ಭಾಗದಲ್ಲಿ ಮೇಲ್ಕಂಡಂತೆ ಆಸನ ವ್ಯವಸ್ಥೆಯನ್ನು ಮಾಡಬೇಕು.

20. ಕಾರ್ಯಕ್ರಮಗಳಿಗೆ ತಡವಾಗಿ ಬರುವ ಸಂಸತ್ ಹಾಗೂ ರಾಜ್ಯ ವಿಧಾನ ಮಂಡಲದ ಸದಸ್ಯರಿಗೆ

ಆಗುವ ಅನಾನುಕೂಲತೆಗಳನ್ನು ನಿವಾರಿಸುವ ಸಲುವಾಗಿ ಅವರಿಗಾಗಿ ಪ್ರತ್ಯೇಕವಾಗಿರಿಸಿದ ಆಸನಗಳನ್ನು ಸಮಾರಂಭ ಮುಗಿಯುವವರೆಗೂ ಕಾದಿರಿಸತಕ್ಕದ್ದು. ಹಾಗೂ ಆ ಆಸನಗಳು ಖಾಲಿಯಿದ್ದಾಗ್ಯೂ ಅವುಗಳನ್ನು ಇತರರು ಉಪಯೋಗಿಸಿಕೊಳ್ಳತಕ್ಕದಲ್ಲ.

21. ಸರ್ಕಾರಿ ಅಧಿಕಾರಿಗಳು ಸಾಮಾನ್ಯವಾಗಿ ಯಾವುದೇ ಸರ್ಕಾರಿ ಕಾರ್ಯಕ್ರಮದ ಅಧ್ಯಕ್ಷತೆಯನ್ನು ವಹಿಸುವುದು ಮತ್ತು ಉದ್ಘಾಟಿಸುವುದನ್ನು ನಿಷೇಧಿಸಿದೆ. ಆದರೆ, ಅನಿವಾರ್ಯ ಸಂದರ್ಭಗಳಲ್ಲಿ ಅಂದರೆ ಅಭಿವೃದ್ಧಿ ಕಾರ್ಯಕ್ರಮಗಳನ್ನು ಹೊರತುಪಡಿಸಿ, ಇನ್ನಿತರ ಸರ್ಕಾರಿ ಕಾರ್ಯಕ್ರಮಗಳಾದ ಜಯಂತಿ/ ಉತ್ಸವ/ ಅರಿವು ಮೂಡಿಸುವ ಕಾರ್ಯಕ್ರಮಗಳಲ್ಲಿ ಆಹ್ವಾನ ಪತ್ರಿಕೆಯಲ್ಲಿ ನಮೂದಿಸಿದ ಯಾವುದೇ ಜನಪ್ರತಿನಿಧಿಗಳು ಕಾರ್ಯಕ್ರಮಕ್ಕೆ ಹಾಜರಾಗದೇ ಇದ್ದ ಸಂದರ್ಭದಲ್ಲಿ ಮಾತ್ರ ಅಧ್ಯಕ್ಷತೆ ವಹಿಸಬಹುದು ಮತ್ತು ಉದ್ಘಾಟನೆ ಮಾಡಬಹುದು ಮತ್ತು ಅವಶ್ಯಕತೆಗೆ ಅನುಗುಣವಾಗಿ ಸಂಬಂಧಪಟ್ಟ ಅಧಿಕಾರಿಗಳು ಕಾರ್ಯಕ್ರಮದ ವೇದಿಕೆ ಮೇಲೆ ಉಪಸ್ಥಿತರಿರಬಹುದು.

<u>ವಿಶೇಷ ಸೂಚನೆಗಳು:</u>

22. ನ್ಯಾಯಾಲಯಗಳಿಗೆ ಸಂಬಂಧಿಸಿದ ಕಾರ್ಯಕ್ರಮಗಳಿಗೆ ಕುರಿತಾಗಿ ಮಾನ್ಯ ಉಚ್ಛ ನ್ಯಾಯಾಲಯದ ನಿರ್ದೇಶನದನ್ವಯ ಕ್ರಮವನ್ನು ಕೈಗೊಳ್ಳುವುದು.

23. ಮಾನ್ಯ ರಾಷ್ಟ್ರಪತಿಗಳು, ಉಪರಾಷ್ಟ್ರಪತಿಗಳು ಮತ್ತು ಪ್ರಧಾನ ಮಂತ್ರಿಗಳು ಭಾಗವಹಿಸುವ ಕಾರ್ಯಕ್ರಮಗಳನ್ನು ಮಾನ್ಯ ರಾಷ್ಟ್ರಪತಿಗಳು, ಉಪರಾಷ್ಟ್ರಪತಿಗಳು ಮತ್ತು ಪ್ರಧಾನ ಮಂತ್ರಿಗಳ ಕಾರ್ಯಾಲಯದ ಅನುಮೋದನೆಯಂತೆ ನಡೆಸುವುದು.

24. ಕೇಂದ್ರ ಸರ್ಕಾರದ ಸಮಾರಂಭಗಳಿಗೆ ಸಂಸತ್ತು ಸದಸ್ಯರನ್ನು ಆಹ್ವಾನಿಸುವ ರೀತಿಯಲ್ಲಿಯೇ ಸ್ಥಳೀಯ ಚುನಾಯಿತ ಪ್ರತಿನಿಧಿಗಳಾದ ವಿಧಾನಮಂಡಲದ ಸದಸ್ಯರುಗಳನ್ನು ಶಿಷ್ಟಾಚಾರದನ್ವಯ ತಪ್ಪದೇ ಆಹ್ವಾನಿಸುವುದು.

25 ಗಣರಾಜ್ಯೋತ್ಸವ ಹಾಗೂ ಸ್ವಾತಂತ್ರ್ಯ ದಿನಾಚರಣೆ ದಿನಗಳಂದು ಯಾರು ಧ್ವಜಾರೋಹಣ ಮಾಡಬೇಕು ಎನ್ನುವ ಬಗ್ಗೆ ಭಾರತ ಸರ್ಕಾರ ಹೊರಡಿಸಿದ ಸುತ್ತೋಲೆಗಳಲ್ಲಿ ನೀಡಲಾದ ನಿರ್ದೇಶನವನ್ನು ಮುಂದುವರೆಸಿಕೊಂಡು ಹೋಗುವುದು.

26. ಸರ್ಕಾರಿ ಆದೇಶಗಳಲ್ಲಿ ಶಾಸಕರು ಅಥವಾ ಖಾಸಗಿ ಪ್ರಮುಖರ ಅಧ್ಯಕ್ಷತೆಯಲ್ಲಿ ಹಲವು ಸಮಿತಿಗಳನ್ನು ನೇಮಕ ಮಾಡಲಾಗಿದೆ. ಆಯಾ ಸಮಿತಿಯ ಕಾರ್ಯವ್ಯಾಪ್ತಿಗೆ ಒಳಪಟ್ಟು ಸಮೀಕ್ಷಣಾ ಸಭೆಗಳನ್ನು ನಡೆಸಬಹುದು. ಇದನ್ನು ಹೊರತುಪಡಿಸಿ ಶಾಸಕರೇ ಆಗಲೀ ಇತರೇ ಖಾಸಗಿ ಪ್ರಮುಖರೇ ಆಗಲೀ ಜಿಲ್ಲಾ ಮತ್ತು ತಾಲ್ಲೂಕು ಮಟ್ಟದಲ್ಲಿ ಸಮೀಕ್ಷಣಾ ಸಭೆಗಳನ್ನು ನಡೆಸುವಂತಿಲ್ಲ. ವಿರೋಧ ಪಕ್ಷದ ನಾಯಕರಿಗೂ ಸಹ ಅಧಿಕಾರಿಗಳ ಸಭೆ ಕರೆಯಲು ಅವಕಾಶವಿರುವುದಿಲ್ಲ ಆದರೆ ಅಗತ್ಯ ಮಾಹಿತಿಯನ್ನು ಸೂಕ್ತವಾಗಿ ಒದಗಿಸಬಹುದಾಗಿದೆ. ಅಂತಹ ಸಭೆಗಳನ್ನು ನಡೆಸಲು ಮಾನ್ಯ ಸಚಿವರು ಮತ್ತು ಅಧಿಕಾರಿಗಳಿಗೆ ಮಾತ್ರ ಅವಕಾಶವಿರುತ್ತದೆ.

27. ಜಿಲ್ಲಾ ಮಟ್ಟದಲ್ಲಿ ಜಿಲ್ಲಾಧಿಕಾರಿಗಳು ಹಾಗೂ ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳು ತಮ್ಮ ಹಂತದಲ್ಲಿ ಬರುವ ಎಲ್ಲಾ ಅಧಿಕಾರಿಗಳಿಗೆ ಶಿಷ್ಟಾಚಾರದ ಬಗ್ಗೆ ಪೂರ್ಣವಾಗಿ ತರಬೇತಿ ನೀಡುವುದು. ಶಿಷ್ಟಾಚಾರ ಲೋಪವಾದ ಪ್ರಕರಣಗಳಲ್ಲಿ ಸಂಬಂಧಪಟ್ಟವರ ಮೇಲೆ ಶಿಸ್ತಿನ ಕ್ರಮ ಕೈಗೊಳ್ಳಲಾಗುವುದೆಂದು ಸಂಬಂಧಪಟ್ಟವರಿಗೆಲ್ಲ ತಿಳಿಸತಕ್ಕದ್ದು. ಸಂಬಂಧಪಟ್ಟ ಅಧಿಕಾರಿಗಳಲ್ಲದೇ, ಶಿಷ್ಟಾಚಾರ ಪಾಲಿಸುವುದರಲ್ಲಿ ವಿಫಲರಾದ ಹಿರಿಯ ಅಧಿಕಾರಿಗಳನ್ನು ಹೊಣೆಗಾರರನ್ನಾಗಿ ಮಾಡಲಾಗುವುದೆಂದು ಈ ಮೂಲಕ ಸೂಚಿಸಿದೆ.

(signature)
ಸರ್ಕಾರದ ಮುಖ್ಯ ಕಾರ್ಯದರ್ಶಿ

**ಪ್ರತಿಗಳು:**

1) ಸರ್ಕಾರದ ಎಲ್ಲಾ ಅಪರ ಮುಖ್ಯ ಕಾರ್ಯದರ್ಶಿಗಳು.
2) ಸರ್ಕಾರದ ಎಲ್ಲಾ ಪ್ರಧಾನ ಕಾರ್ಯದರ್ಶಿಗಳು / ಕಾರ್ಯದರ್ಶಿಗಳು.
3) ರಾಜ್ಯಪಾಲರ ಪ್ರಧಾನ ಕಾರ್ಯದರ್ಶಿಗಳು, ರಾಜಭವನ, ಬೆಂಗಳೂರು.
4) ನಿವಾಸಿ ಆಯುಕ್ತರು, ಕರ್ನಾಟಕ ಭವನ, ನವದೆಹಲಿ.
5) ಕಾರ್ಯದರ್ಶಿ, ಕರ್ನಾಟಕ ವಿಧಾನಸಭೆ.
6) ಕಾರ್ಯದರ್ಶಿ, ಕರ್ನಾಟಕ ವಿಧಾನ ಪರಿಷತ್.
7) ಎಲ್ಲಾ ವಿಭಾಗಾಧಿಕಾರಿಗಳು.
8) ಎಲ್ಲಾ ಇಲಾಖಾ ಮುಖ್ಯಸ್ಥರುಗಳು.
9) ಎಲ್ಲಾ ಜಿಲ್ಲಾಧಿಕಾರಿಗಳು.
10) ಎಲ್ಲಾ ಜಿಲ್ಲಾ ಪಂಚಾಯತ್ ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳು.
11) ಎಲ್ಲಾ ಸಚಿವರ ಆಪ್ತ ಕಾರ್ಯದರ್ಶಿಗಳು.
12) ಪತ್ರಿಕಾ ಪ್ರಕಟಣೆ / ಹೆಚ್ಚುವರಿ ಪ್ರತಿಗಳು.

**ಮಾಹಿತಿಗಾಗಿ:**

1) ಮುಖ್ಯ ಕಾರ್ಯದರ್ಶಿಯವರ ಆಪ್ತ ಕಾರ್ಯದರ್ಶಿ.
2) ಸರ್ಕಾರದ ಪ್ರಧಾನ ಕಾರ್ಯದರ್ಶಿ, ಸಿಆಸು ಇಲಾಖೆ ಇವರ ಆಪ್ತ ಕಾರ್ಯದರ್ಶಿ.
3) ಸರ್ಕಾರದ ಅಧೀನ ಕಾರ್ಯದರ್ಶಿ, ಸಿಆಸು ಇಲಾಖೆ (ರಾಜಕೀಯ)

## ಕರ್ನಾಟಕ ವಿಧಾನಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 53 |
| ಮಾನ್ಯ ಸದಸ್ಯರ ಹೆಸರು | ಶ್ರೀ ದೇವಾನಂದ್ ಫುಲಸಿಂಗ್ ಚವಾಣ್ (ನಾಗಠಾಣ) |
| ಉತ್ತರಿಸಬೇಕಾದವರು | ಅಬಕಾರಿ ಸಚಿವರು |
| ಉತ್ತರಿಸಬೇಕಾದ ದಿನಾಂಕ | 13.09.2022 |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ನಾಗಠಾಣ ಮತಕ್ಷೇತ್ರ ವ್ಯಾಪ್ತಿಯ ಗ್ರಾಮೀಣ ಪ್ರದೇಶಗಳಲ್ಲಿ ನಡೆಯುತ್ತಿರುವ ಅಕ್ರಮ ಮದ್ಯ ಮಾರಾಟವನ್ನು ತಡೆಗಟ್ಟಲು ಸರ್ಕಾರ ಕೈಗೊಂಡ ಕ್ರಮಗಳೇನು; ಕಳೆದ 3 ವರ್ಷಗಳಲ್ಲಿ ನಾಗಠಾಣ ಮತಕ್ಷೇತ್ರ ವ್ಯಾಪ್ತಿಯಲ್ಲಿ ದಾಖಲಾದ ಅಕ್ರಮ ಮದ್ಯ ಮಾರಾಟ ಪ್ರಕರಣಗಳೆಷ್ಟು; ಈ ಪ್ರಕರಣಗಳು ಯಾವ ಹಂತದಲ್ಲಿವೆ; (ಸಂಪೂರ್ಣ ವಿವರ ನೀಡುವುದು) | ನಾಗಠಾಣ ಮತಕ್ಷೇತ್ರ ವ್ಯಾಪ್ತಿಯ ಗ್ರಾಮೀಣ ಪ್ರದೇಶಗಳಲ್ಲಿ ಅಕ್ರಮ ಮದ್ಯ ಮಾರಾಟವನ್ನು ತಡೆಗಟ್ಟಲು ವಲಯ ವ್ಯಾಪ್ತಿಯ ರೂಟ್‌ಗಳಲ್ಲಿ ನಿರಂತರವಾಗಿ ಗಸ್ತು ನಡೆಸಲಾಗುತ್ತಿದೆ. ಗಸ್ತಿನ ಸಮಯದಲ್ಲಿ ಮತ್ತು ದೂರು ಸ್ವೀಕೃತವಾದಲ್ಲಿ ಅಕ್ರಮವಾಗಿ ಮದ್ಯ ಮಾರಾಟ ಮಾಡುತ್ತಿರುವ ಸ್ಥಳಗಳ ಮೇಲೆ ದಾಳಿ ನಡೆಸಿ ಅಕ್ರಮಗಳು ಕಂಡು ಬಂದಲ್ಲಿ ಅಬಕಾರಿ ಕಾಯ್ದೆ ಮತ್ತು ನಿಯಮಗಳನುಸಾರ ಪ್ರಕರಣಗಳನ್ನು ದಾಖಲಿಸಲಾಗುತ್ತಿದೆ. ರಾಷ್ಟ್ರೀಯ ಮತ್ತು ರಾಜ್ಯ ಹೆದ್ದಾರಿಗಳಲ್ಲಿ ನಿಯಮಿತವಾಗಿ ರಸ್ತೆಗಾವಲು ನಡೆಸಿ ಸಂಶಯಾಸ್ಪದ ವಾಹನಗಳನ್ನು ತಪಾಸಣೆಗೆ ಒಳಪಡಿಸಲಾಗುತ್ತಿದೆ. ಜಿಲ್ಲಾ ಮಟ್ಟದಲ್ಲಿ ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಸ್ಥಾಯಿ ಸಮಿತಿ ಸಭೆಯನ್ನು ಏರ್ಪಡಿಸಿ ಇತರೆ ಇಲಾಖೆಗಳೊಂದಿಗೆ ಸಮನ್ವಯ ಸಾಧಿಸಿ ಅಕ್ರಮ ಹತ್ತಿಕ್ಕಲು ಕ್ರಮ ವಹಿಸುವ ಕುರಿತು ಪೊಲೀಸ್ ವರಿಷ್ಠಾಧಿಕಾರಿಗಳು ಮತ್ತು ಜಿಲ್ಲಾ ಅರಣ್ಯ ಸಂರಕ್ಷಣಾಧಿಕಾರಿಗಳೊಂದಿಗೆ ಜಂಟಿ ಕಾರ್ಯಚರಣೆ ನಡೆಸಲಾಗುತ್ತಿದೆ. ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 50ರಂತೆ ಕಾರ್ಯವ್ಯಾಪ್ತಿಯಲ್ಲಿ ನಡೆಯುವ ಅಬಕಾರಿ ಅಕ್ರಮಗಳ ಕುರಿತು ಮಾಹಿತಿ ನೀಡಲು ತಿಳುವಳಿಕೆ ಪತ್ರ ಜಾರಿಗೊಳಿಸಲಾಗಿರುತ್ತದೆ.<br><br>ಕಳೆದ 3 ವರ್ಷಗಳಲ್ಲಿ ನಾಗಠಾಣ ಮತಕ್ಷೇತ್ರ ವ್ಯಾಪ್ತಿಯಲ್ಲಿ ಅಕ್ರಮ ಮದ್ಯ ಮಾರಾಟ ಮಾಡುವ ಸಂಬಂಧ |

<table>
<tr><td></td><td></td><td>ಕರ್ನಾಟಕ ಅಬಕಾರಿ ಕಾಯ್ದೆಯನ್ವಯ ದಾಖಲಿಸಿದ ಪ್ರಕರಣಗಳ ವಿವರ ಕೆಳಕಂಡಂತಿದೆ.<br><br>| ಅಬಕಾರಿ ಸಾಲು (ಜುಲೈ ರಿಂದ ಜೂನ್ ಮಾಹೆಯವರೆಗೆ) | ದಾಖಲಿಸಿದ ಪ್ರಕರಣಗಳ ಸಂಖ್ಯೆ |<br>| --- | --- |<br>| 2019–20 | 07 |<br>| 2020–21 | 10 |<br>| 2021–22 | 21 |<br>| ಒಟ್ಟು | **38** |<br><br>ದಾಖಲಿಸಲಾದ ಪ್ರಕರಣಗಳಲ್ಲಿ ಒಳಗೊಂಡ ಆರೋಪಿತರ ವಿರುದ್ಧ ಸೂಕ್ತ ತನಿಖೆ ಕೈಗೊಂಡು ಸಕ್ಷಮ ನ್ಯಾಯಾಲಯದಲ್ಲಿ ದೋಷಾರೋಪಣಾ ಪಟ್ಟಿಯನ್ನು ಸಲ್ಲಿಸಲಾಗಿರುತ್ತದೆ.</td></tr>
<tr><td>ಆ)</td><td>ಈ ಮತಕ್ಷೇತ್ರದಲ್ಲಿ ಎಷ್ಟು ನೋಂದಾಯಿತ ಮದ್ಯ ಮಾರಾಟ ಮಳಿಗೆಗಳಿವೆ;</td><td>ನಾಗಠಾಣ ಮತಕ್ಷೇತ್ರ ವ್ಯಾಪ್ತಿಯಲ್ಲಿ 2022–23ನೇ ಸಾಲಿನಲ್ಲಿ ಕಾರ್ಯನಿರ್ವಹಿಸುತ್ತಿರುವ ವಿವಿಧ ಮದ್ಯ ಮಾರಾಟ ಸನ್ನದುಗಳ ವಿವರ ಕೆಳಕಂಡಂತಿದೆ.<br><br>| ಸನ್ನದು ವಿಧ | ಕಾರ್ಯನಿರ್ವಹಿಸುತ್ತಿರುವ ಸನ್ನದುಗಳ ಸಂಖ್ಯೆ |<br>| --- | --- |<br>| ಸಿಎಲ್–2 | 13 |<br>| ಸಿಎಲ್–4 | 03 |<br>| ಸಿಎಲ್–7 | 05 |<br>| ಸಿಎಲ್–11(ಸಿ) | 08 |<br>| ವೈನ್ ಬೋಟಿಕ್ | 01 |<br>| ಒಟ್ಟು | **30** |</td></tr>
<tr><td>ಇ)</td><td>ಈ ಮಳಿಗೆಗಳಿಂದ ನಿರೀಕ್ಷಿತ ವಾರ್ಷಿಕ ವಹಿವಾಟು ಎಷ್ಟು; ನಾಗಠಾಣ ಮತಕ್ಷೇತ್ರದಲ್ಲಿ ಎಷ್ಟು MSIL ಮದ್ಯ ಮಾರಾಟ ಮಳಿಗೆಗಳಿವೆ? (ಸಂಪೂರ್ಣ ವಿವರ ನೀಡುವುದು)</td><td>ನಾಗಠಾಣ ಮತಕ್ಷೇತ್ರ ವ್ಯಾಪ್ತಿಯಲ್ಲಿ ಕಾರ್ಯನಿರ್ವಹಿಸುತ್ತಿರುವ ಒಟ್ಟು 30 ಮದ್ಯ ಮಾರಾಟ ಸನ್ನದುಗಳಲ್ಲಿ ಕಳೆದ ಎರಡು ವರ್ಷಗಳಲ್ಲಿ ಆಗಿರುವ ಮದ್ಯದ ಎತ್ತುವಳಿಯ ವಿವರ ಕೆಳಕಂಡಂತಿದೆ.<br><br>| ಅಬಕಾರಿ ಸಾಲು (ಜುಲೈ ರಿಂದ ಜೂನ್ ಮಾಹೆಯವರೆಗೆ) | ಮದ್ಯದ ಎತ್ತುವಳಿ (ಪೆಟ್ಟಿಗೆಗಳಲ್ಲಿ) |<br>| --- | --- |<br>| 2020–21 | 69569 |<br>| 2021–22 | 72955 |</td></tr>
</table>

| | | |
|---|---|---|
| | | ನಾಗಠಾಣ ಮತಕ್ಷೇತ್ರ ವ್ಯಾಪ್ತಿಯಲ್ಲಿ 08 ಸಿಎಲ್-11(ಸಿ) (MSIL) ಮದ್ಯ ಮಾರಾಟ ಸನ್ನದುಗಳು ಕಾರ್ಯನಿರ್ವಹಿಸುತ್ತಿದ್ದು ವಿವರ ಕೆಳಕಂಡಂತಿದೆ.<br>1. ಪ್ರಾಪರ್ಟಿ ನಂ:2036, ಕೆನಾಲ ರೋಡ್, ನಾಗಠಾಣ<br>2. ಸಿಂದಗಿ ರಸ್ತೆ, ಸಿಟಿಎಸ್ ನಂ:1287/5ಎ/5ಬಿ, ಪ್ಲಾಟ ನಂ:141/3, ವಿಜಯಪುರ<br>3. ಕನ್ನೂರು ಗ್ರಾಮದ ಆಸ್ತಿ ನಂ.1221<br>4. ಸರ್ವೆ ನಂ137/*, ಇಂಡಿ ರೋಡ್ ಡಂಪಿಂಗ್ ಯಾರ್ಡ ಎದುರಿಗೆ, ವಿಜಯಪುರ<br>5. ಪ್ರಾಪರ್ಟಿ ನಂ. 701, ಜೀಗಜೀವಣಿ<br>6. ಸರ್ವೆ ನಂ. 639, ರೇವತಗಾಂವ<br>7. ಪ್ರಾಪರ್ಟಿ ನಂ:261/3, ಹಲಸಂಗಿ<br>8. ಪ್ರಾಪರ್ಟಿ ನಂ:2231/2, ಪ್ಲಾಟ ನಂ;121, ಚಡಚಣ |

**ಆಇ 67 ಇಎಲ್‌ಕ್ಯೂ 2022**

(ಕೆ. ಗೋಪಾಲಯ್ಯ)
ಅಬಕಾರಿ ಸಚಿವರು

# ಕರ್ನಾಟಕ ವಿಧಾನ ಸಭೆ

| | | |
|---|---|---|
| 01. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 54 |
| 02. ಮಾನ್ಯ ವಿಧಾನ ಸಭೆ ಸದಸ್ಯರ ಹೆಸರು | : | ಶ್ರೀ. ದೇವಾನಂದ ಫುಲಸಿಂಗ್ ಚವಾಣ್. (ನಾಗಠಾಣ) |
| 03. ಉತ್ತರಿಸುವ ದಿನಾಂಕ | : | 13-09-2022 |
| 04. ಉತ್ತರಿಸುವ ಸಚಿವರು. | : | ಗೃಹ ಸಚಿವರು. |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ | ನಾಗಠಾಣಾ ಮತಕ್ಷೇತ್ರ ವ್ಯಾಪ್ತಿಯ ಚಡಚಣ ಪೊಲೀಸ್ ಠಾಣೆ ವ್ಯಾಪ್ತಿಯಲ್ಲಿ ಕಳೆದ 3 ವರ್ಷಗಳಿಂದ ಠಾಣೆಯ ಪೊಲೀಸ್ ಅಧಿಕಾರಿಗಳ ನಿರ್ಲಕ್ಷ್ಯ ಹಾಗೂ ಬೇಜವಬ್ದಾರಿಯಿಂದಾಗಿ ಪ್ರತಿನಿತ್ಯ ದರೋಡೆ, ಕೊಲೆ, ಸುಲಿಗೆ, ಅಕ್ರಮ ಮರಳು ಸಾಗಾಣಿಕೆ, ಗುಟ್ಕಾ ತಯಾರಿಕೆ ಹಾಗೂ ಮಾರಾಟ ಪ್ರಕರಣಗಳು ಯಾರ ಭಯವೂ ಇಲ್ಲದೇ ಹಾಡು ಹಗಲೇ ನಡೆಯುತ್ತಿರುವುದರಿಂದ ಜನರಲ್ಲಿ ಭಯದ ವಾತಾವರಣ ಸೃಷ್ಟಿಯಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಚಡಚಣ ಪೊಲೀಸ್ ಠಾಣಾ ವ್ಯಾಪ್ತಿಯಲ್ಲಿ ಕಳೆದ ಮೂರು ವರ್ಷಗಳಲ್ಲಿ ಕೊಲೆ, ಅಕ್ರಮ ಮರಳು ಸಾಗಾಣಿಕೆ ಮತ್ತು ಅಕ್ರಮ ಗುಟ್ಕಾ ಪ್ರಕರಣಗಳು ವರದಿಯಾಗಿರುತ್ತವೆ. ದರೋಡೆ ಮತ್ತು ಸುಲಿಗೆ ಪ್ರಕರಣಗಳು ಜರುಗಿರುವುದಿಲ್ಲ.<br><br>ವರದಿಯಾದ ಕೊಲೆ, ಅಕ್ರಮ ಮರಳು ಸಾಗಾಣಿಕೆ ಮತ್ತು ಅಕ್ರಮ ಗುಟ್ಕಾ ಪ್ರಕರಣಗಳಲ್ಲಿ ಕಾನೂನು ರೀತ್ಯಾ ಕ್ರಮ ಕೈಗೊಳ್ಳಲಾಗಿರುತ್ತದೆ. ಪ್ರಕರಣಗಳ ಮಾಹಿತಿಯನ್ನು **ಅನುಬಂಧ-1ರಲ್ಲಿ** ಒದಗಿಸಲಾಗಿದೆ.<br><br>ವರದಿಯಾದ ಪ್ರಕರಣಗಳಲ್ಲಿ ಪೊಲೀಸ್ ಅಧಿಕಾರಿಗಳ ನಿರ್ಲಕ್ಷ್ಯ ಮತ್ತು ಬೇಜವಬ್ದಾರಿತನ ಕಂಡು ಬಂದಿರುವುದಿಲ್ಲ. ಕಂಡು ಬಂದಲ್ಲಿ ನಿರ್ದಾಕ್ಷಿಣ್ಯವಾಗಿ ಕ್ರಮ ಕೈಗೊಳ್ಳಲಾಗುವುದು. |
| ಆ | ಈ ಪೊಲೀಸ್ ಠಾಣೆ ವ್ಯಾಪ್ತಿಯಲ್ಲಿ ನಡೆಯುತ್ತಿರುವ ಅಕ್ರಮಗಳ ಕುರಿತು ಸಾಕ್ಷ್ಯಾಧಾರಗಳ ಸಮೇತ ಇಲಾಖೆಯ ಮೇಲಾಧಿಕಾರಿಗಳು ಹಾಗೂ ಜಿಲ್ಲಾಧಿಕಾರಿಗಳು ಮತ್ತು ಸರ್ಕಾರದ ಗಮನಕ್ಕೆ ತಂದು ತಪ್ಪಿತಸ್ಥ ಅಧಿಕಾರಿಗಳ ಮೇಲೆ ಸೂಕ್ತ ಕ್ರಮ ಜರುಗಿಸುವಂತೆ ಕೋರಿಕೆ ನೀಡಿದ್ದರೂ ಸಹ ಯಾವುದೇ ಕ್ರಮ ಕೈಗೊಳ್ಳದೇ ನಿರ್ಲಕ್ಷ್ಯ ವಹಿಸುತ್ತಿರುವುದರ ಹಿಂದಿನ ಉದ್ದೇಶವೇನು: (ವಿವರ ನೀಡುವುದು) | ಚಡಚಣ ಪೊಲೀಸ್ ಠಾಣಾ ವ್ಯಾಪ್ತಿಯಲ್ಲಿ ಪೊಲೀಸ್ ಅಧಿಕಾರಿಗಳು ಯಾವುದೇ ಅಕ್ರಮ ಚಟುವಟಿಕೆಯಲ್ಲಿ ಭಾಗಿಯಾಗಿರುವುದಿಲ್ಲ. ಅಕ್ರಮ ಮರಳು ಸಾಗಾಣಿಕೆ ಬಗ್ಗೆ ಭೀಮಾ ನದಿ ತೀರ ಪ್ರದೇಶದಲ್ಲಿ ಪ್ರಸಕ್ತ ಶ್ರೀ ಸಾರ್ವಭೌಮ ಬಗಲಿ ರವರು ಸಲ್ಲಿಸಿರುವ ಡಬ್ಲ್ಯೂ.ಪಿ. ಪ್ರಕಾರ ಎನ್.ಜಿ.ಟಿ ಯಲ್ಲಿ ಮರಳುಗಾರಿಕೆಯನ್ನು ಸಂಪೂರ್ಣವಾಗಿ ನಿಷೇಧ ಮಾಡಿ ಆದೇಶಿಸಿರುವ ಹಿನ್ನೆಲೆಯಲ್ಲಿ, ಯಾವುದೇ ಮರಳುಗಾರಿಕೆ ನಡೆದಿರುವುದಿಲ್ಲ. ಸಣ್ಣ ಪುಟ್ಟ ಮರಳು ಸಾಗಾಣಿಕೆಗಾರರ ಮೇಲೆ ಸಹ ಕಾನೂನು ಅಡಿಯಲ್ಲಿ ಪ್ರಕರಣ ದಾಖಲಿಸಲಾಗುತ್ತಿದೆ. ಅದಾಗ್ಯೂ ಸಹ ಅಕ್ರಮ ಚಟುವಟಿಕೆಯಲ್ಲಿ ಪೊಲೀಸ್ ಅಧಿಕಾರಿಗಳು ಮತ್ತು ಸಿಬ್ಬಂದಿಗಳು ಭಾಗಿಯಾಗಿರುವ ಬಗ್ಗೆ ಸಾಕ್ಷ್ಯಾಧಾರಗಳು ಕಂಡು ಬಂದಲ್ಲಿ ನಿರ್ದಾಕ್ಷಿಣ್ಯವಾಗಿ ಕ್ರಮ ಕೈಗೊಳ್ಳಲಾಗುವುದು. |

-2

| | | |
|---|---|---|
| ಇ | ಈ ಪೊಲೀಸ್ ಠಾಣಾ ವ್ಯಾಪ್ತಿಯಲ್ಲಿ ನಡೆಯುವ ಅಕ್ರಮ ಚಟುವಟಿಕೆಗಳನ್ನು ಮಟ್ಟ ಹಾಕಲು ಸರ್ಕಾರ ಕೈಗೊಂಡ ಕ್ರಮಗಳೇನು;<br>(ಸಂಪೂರ್ಣ ವಿವರ ನೀಡುವುದು) | ಈ ಪೊಲೀಸ್ ಠಾಣಾ ವ್ಯಾಪ್ತಿಯಲ್ಲಿ ನಡೆಯುವ ಅಕ್ರಮ ಚಟುವಟಿಕೆಗಳನ್ನು ಮಟ್ಟ ಹಾಕಲು :-<br>➢ ಠಾಣಾ ವ್ಯಾಪ್ತಿಯಲ್ಲಿ ಸುಧಾರಿತ ಬೀಟ್ ವ್ಯವಸ್ಥೆಯನ್ನು ಕೈಕೊಳ್ಳಲಾಗಿದೆ<br>➢ ಸಾರ್ವನಿಕರ ಅನುಕೂಲಕ್ಕಾಗಿ ಇ.ಆರ್.ಎಸ್.ಎಸ್. 112 ವಾಹನ ವ್ಯವಸ್ಥೆಯನ್ನು ಮಾಡಲಾಗಿದ್ದು ತಕ್ಷಣ ಗಲಭೆ ನಡೆದ ಸ್ಥಳಗಳಿಗೆ ಭೇಟಿ ನೀಡಿ ಕ್ರಮ ಜರುಗಿಸಲಾಗುತ್ತಿದೆ<br>➢ ಠಾಣೆಗಳಲ್ಲಿ ಮಹಿಳೆಯರಿಗಾಗಿ ಪ್ರತ್ಯೇಕ ಮಹಿಳಾ ಹೆಲ್ಪ್ ಡೆಸ್ಕ್ ತೆರೆಯಲಾಗಿದೆ.<br>➢ ಪ್ರತಿಯೊಂದು ಹಳ್ಳಿಗಳಲ್ಲಿ ಜನ ಸಂಪರ್ಕ ಸಭೆಗಳನ್ನು ನಡೆಸಿ ಜನರ ಸಮಸ್ಯೆಗಳನ್ನು ಬಗೆಹರಿಸಲಾಗುತ್ತಿದೆ.<br>➢ ಅಕ್ರಮ ಚಟುವಟಿಕೆಯಲ್ಲಿ ತೊಡಗಿರುವ ತಪ್ಪಿತಸ್ಥರ ಮೇಲೆ ನಿರ್ದಾಕ್ಷಿಣ್ಯವಾಗಿ ಕಾನೂನಿನ ಅಡಿಯಲ್ಲಿ ಕ್ರಮ ಜರುಗಿಸಲಾಗುತ್ತಿದೆ. |
| ಈ | ಕಳೆದ 3 ವರ್ಷಗಳಲ್ಲಿ ಚಡಚಣ ಪೊಲೀಸ್ ಠಾಣಾ ವ್ಯಾಪ್ತಿಯಲ್ಲಿ ಅಕ್ರಮ ಚಟುವಟಿಕೆಗಳ ಕುರಿತು ದಾಖಲಾದ ಪ್ರಕರಣಗಳೆಷ್ಟು?<br>(ವರ್ಷಾವಾರು ದಾಖಲೆಯೊಂದಿಗೆ ಅಂಕಿ ಸಂಖ್ಯೆಗಳ ವಿವರವಾದ ಮಾಹಿತಿ ನೀಡುವುದು) | ಕಳೆದ 3 ವರ್ಷಗಳಲ್ಲಿ ಚಡಚಣ ಪೊಲೀಸ್ ಠಾಣಾ ವ್ಯಾಪ್ತಿಯಲ್ಲಿ ಅಕ್ರಮ ಚಟುವಟಿಕೆಗಳ ಕುರಿತು ದಾಖಲಾದ ಪ್ರಕರಣಗಳ ಮಾಹಿತಿಯನ್ನು <u>ಅನುಬಂಧ-2 ರಲ್ಲಿ</u> ಒದಗಿಸಲಾಗಿದೆ. |

ಒಇ 54 ಪಿಸಿಕ್ಯೂ 2022

(ಆರಗ ಜ್ಞಾನೇಂದ್ರ)
ಗೃಹ ಸಚಿವರು.

## ಅನುಬಂಧ – 1

### ಕೊಲೆ ಪ್ರಕರಣಗಳು

| ಅ.ನಂ | ಪೊಲೀಸ್ ಠಾಣೆ | ಗುನ್ನೆ ನಂ ಮತ್ತು ಕಲಂ |
|---|---|---|
| | | 2019 |
| 01 | ಚಡಚಣ | – |
| | | 2020 |
| 01 | ಚಡಚಣ | ಗುನ್ನೆನಂ:05/2020 ಕಲಂ–. 302 ಐಪಿಸಿ |
| 02 | ಚಡಚಣ | ಗುನ್ನೆ ನಂ: 10/2020 ಕಲಂ: 498(ಎ), 302 ಐಪಿಸಿ. |
| 03 | ಚಡಚಣ | ಗುನ್ನೆ ನಂ: 47/2020 ಕಲಂ:302 IPC.&3.(2).(V). SC & ST NEW PA.ACT.2015. |
| 04 | ಚಡಚಣ | ಗುನ್ನಾ ನಂ:51/2020 ಕಲಂ:302,498(ಎ) |
| 05 | ಚಡಚಣ | ಗುನ್ನೆ ನಂ: 67/2020 ಕಲಂ:302, 201 ರೇ/ವು 34 ಐಪಿಸಿ. |
| | | 2021 |
| 01 | ಚಡಚಣ | ಗುನ್ನೆ ನಂ: 06/2021 ಕಲಂ: 302, 201 ರೇ/ವು 34 ಐಪಿಸಿ. |
| 02 | ಚಡಚಣ | ಗುನ್ನಾ ನಂ: 65/2021 ಕಲಂ: 302, 201 ಐಪಿಸಿ |
| 03 | ಚಡಚಣ | ಗುನ್ನಾ ನಂ: 101/2021, ಕಲಂ: 302 – 201 ಐಪಿಸಿ |
| 04 | ಚಡಚಣ | ಚಡಚಣ ಪಿ.ಎಸ್.ಗುನ್ನಾ ನಂ: 109/2021, ಕಲಂ: 302 ಐಪಿಸಿ |
| | | 2022 ಆಗಸ್ಟ್ ವರೆಗೆ |
| 01 | ಚಡಚಣ | ಗುನ್ನಾ ನಂ: 90/2022, ಕಲಂ: 302 ಐಪಿಸಿ |

### ಅಕ್ರಮ ಮರಳುಗಾರಿಕೆ ಸನ್ –2019 ರಿಂದ 2022 ಆಗಸ್ಟ್ ವರೆಗೆ

| ಅ.ನಂ | ಪೊಲೀಸ್ ಠಾಣೆ | ಗುನ್ನೆ ನಂ ಮತ್ತು ಕಲಂ |
|---|---|---|
| | | 2019 |
| 1. | ಚಡಚಣ | ಗುನ್ನೆ ನಂ:15/2019 ಕಲಂ: 379 ಐ.ಪಿ.ಸಿ. |
| 2. | ಚಡಚಣ | ಗುನ್ನೆ ನಂ: 23/2019 ಕಲಂ: 379, 511 ಐಪಿಸಿ. |
| 3. | ಚಡಚಣ | ಗುನ್ನೆ ನಂ: 25/2019 ಕಲಂ: 379 ಐಪಿಸಿ. |
| 4. | ಚಡಚಣ | ಗುನ್ನಾ ನಂಬರ 26/2019. ಕಲಂ–379.ಐ.ಪಿ.ಸಿ |
| 5. | ಚಡಚಣ | ಗುನ್ನಾ ನಂಬರ 27/2019. ಕಲಂ–379.ಐ.ಪಿ.ಸಿ |
| 6. | ಚಡಚಣ | ಗುನ್ನಾ ನಂಬರ 28/2019. ಕಲಂ–379 ಐ.ಪಿ.ಸಿ |
| 7. | ಚಡಚಣ | ಗುನ್ನಾ ನಂಬರ 31/2019. ಕಲಂ–379 IPC |
| 8. | ಚಡಚಣ | ಗುನ್ನೆ ನಂ : 49/2019 ಕಲಂ: 379 ಐ.ಪಿ.ಸಿ. |
| 9. | ಚಡಚಣ | ಗುನ್ನೆ ನಂ : 50/2019 ಕಲಂ: 379 ಐ.ಪಿ.ಸಿ. |
| 10. | ಚಡಚಣ | ಗುನ್ನೆ ನಂ : 56/2019 ಕಲಂ : 379 ಐಪಿಸಿ. |
| 11. | ಚಡಚಣ | ಗುನ್ನೆ ನಂ : 61/2019 ಕಲಂ : 379 ಐಪಿಸಿ. |
| 12. | ಚಡಚಣ | ಗುನ್ನೆ ನಂ : 66/2019. ಕಲಂ: 379 ಐಪಿಸಿ. |
| 13. | ಚಡಚಣ | ಗುನ್ನೆ ನಂ : 67/2019. ಕಲಂ: 379 ಐಪಿಸಿ. |
| 14. | ಚಡಚಣ | ಗುನ್ನಾ ನಂ: 68/2019 ಕಲಂ: 379 ಐಪಿಸಿ |
| 15. | ಚಡಚಣ | ಗುನ್ನೆ ನಂ : 76/2019 ಕಲಂ : 379 ಐಪಿಸಿ |
| 16. | ಚಡಚಣ | ಗುನ್ನೆ ನಂ : 77/2019 ಕಲಂ : 379 ಐಪಿಸಿ |
| 17. | ಚಡಚಣ | ಗುನ್ನಾ ನಂ: 83/2019 ಕಲಂ: 379 IPC |

| 18. | ಚಡಚಣ | ಗುನ್ನಾ ನಂ: 92/2019 379 IPC |
|---|---|---|
| 19. | ಚಡಚಣ | ಗುನ್ನೆನಂ:100/2019 ಕಲಂ- 379 IPC. |
| 20. | ಚಡಚಣ | ಗುನ್ನೆನಂ:106/2019 ಕಲಂ- 379 IPC |
| 21. | ಚಡಚಣ | ಗುನ್ನೆನಂ:108/2019 ಕಲಂ- 379 IPC |
| | | **2020** |
| 01 | ಚಡಚಣ | ಗುನ್ನೆನಂ:82/2020 ಕಲಂ- 379 IPC |
| 02 | ಚಡಚಣ | 20/2020ಕಲಂ:379ಐಪಿಸಿ |
| 03 | ಚಡಚಣ | ಗುನ್ನಾ ನಂ:34/2020ಕಲಂ:379ಐಪಿಸಿ |
| | | **2021** |
| 01 | ಚಡಚಣ | ಪಿಸಿ ಗುನ್ನಾ ನಂ:01/2021,ಕಲಂ:4(1),1ಎ,2(1), ಎಮ್,ಎಮ್.ಆರ್.ಟಿ.ಆಕ್ಟ |
| 02 | ಚಡಚಣ | ಪಿಸಿ ಗುನ್ನಾ ನಂ:02/2021,ಕಲಂ:4(1),1ಎ,2(1), ಎಮ್,ಎಮ್.ಆರ್.ಟಿ.ಆಕ್ಟ |
| 03 | ಚಡಚಣ | ಪಿಸಿ ಗುನ್ನಾ ನಂ:03/2021,ಕಲಂ:4(1),1ಎ,2(1), ಎಮ್,ಎಮ್.ಆರ್.ಟಿ.ಆಕ್ಟ |
| 04 | ಚಡಚಣ | ಗುನ್ನೆ ನಂ: 20/2021 ಕಲಂ: 379 ಐಪಿಸಿ ಮತ್ತು ಕಲಂ: 31[ಆರ್] ಮತ್ತು 42 ಕೆ.ಎಂ.ಎಂ.ಸಿ.ಆರ್. ಕಾಯಿದೆ – 1994 |
| 05 | ಚಡಚಣ | ಗುನ್ನಾ ನಂ: 58/2021 ಕಲಂ: _379 ಐಪಿಸಿ ಮತ್ತು 3[1] ಕೆ.ಎಂ.ಎಂ.ಸಿ.ಆರ್ ಕಾಯಿದೆ – 1994 & ಕಲಂ: 4[1], 4[1–ಎ] ಎಂ.ಎಂ.ಆರ್.ಡಿ ಕಾಯಿದೆ – 1957 |
| | | **2022 ಆಗಸ್ಟ್ ವರೆಗೆ** |
| 01 | ಚಡಚಣ | ಗುನ್ನಾ ನಂ: 04/2022, ಕಲಂ: ಕಲಂ: 379 ಐಪಿಸಿ ಮತ್ತು ಕಲಂ: 31[ಆರ್] ಮತ್ತು 42 ಕೆ.ಎಂ.ಎಂ.ಸಿ.ಆರ್. ಕಾಯಿದೆ – 1994 |
| 02 | ಚಡಚಣ | ಗುನ್ನಾ ನಂ: 12/2022, ಕಲಂ: 379 ಐಪಿಸಿ ಮತ್ತು ಕಲಂ: 31[ಆರ್] ಮತ್ತು 42 ಕೆ.ಎಂ.ಎಂ.ಸಿ.ಆರ್. ಕಾಯಿದೆ – 1994 |
| 03 | ಚಡಚಣ | ಚಡಚಣ ಪಿ.ಎಸ್.ಗುನ್ನಾ ನಂ: ಗುನ್ನಾ ನಂ: 45/2022 ಕಲಂ: 379 ಐಪಿಸಿ ಮತ್ತು ಕಲಂ: 31[ಆರ್] ಮತ್ತು 42 ಕೆ.ಎಂ.ಎಂ.ಸಿ.ಆರ್. ಕಾಯಿದೆ – 1994 |

## ಅಕ್ರಮ ಮಾವಾ/ಗುಟ್ಕಾ ಪ್ರಕರಣಗಳು ಸನ್ -2019 ರಿಂದ 2022 ಇಲ್ಲಿಯವರೆಗೆ

| ಅ.ನಂ | ಪೊಲೀಸ್ ಠಾಣೆ | ಗುನ್ನೆ ನಂ ಮತ್ತು ಕಲಂ |
|---|---|---|
| | | **2019** |
| 01 | ಚಡಚಣ | ಗುನ್ನಾ ನಂ:72/2019ಕಲಂ:24,20(2) ಐಪಿಸಿಕೋಪ್ಟಾ ಆಕ್ಟ – 2003 |
| | | **2020** |
| 01 | ಚಡಚಣ | ಗುನ್ನಾ ನಂ:64/2020ಕಲಂ: ಕಲಂ:24,20(2) ಐಪಿಸಿಕೋಪ್ಟಾ ಆಕ್ಟ – 2003 |
| 02 | ಚಡಚಣ | ಗುನ್ನಾ ನಂ:66/2020ಕಲಂ: ಕಲಂ:24,20(2) ಐಪಿಸಿಕೋಪ್ಟಾ ಆಕ್ಟ – 2003 |
| | | **2021** |
| 1. | ಚಡಚಣ | ಗುನ್ನಾ ನಂ:09/2021ಕಲಂ:272,420,273, ಐಪಿಸಿ & 20,24(2), ಕೋಪ್ಟಾ ಆಕ್ಟ – 2003 |
| 2. | ಚಡಚಣ | ಗುನ್ನಾ ನಂ:09/2021ಕಲಂ:272,420,273, ಐಪಿಸಿ & 20,24(2)ಕೋಪ್ಟಾ ಆಕ್ಟ – 2003 |
| 3. | ಚಡಚಣ | ಗುನ್ನಾ ನಂ:25/2021ಕಲಂ:272,420,273, ಐಪಿಸಿ & 20,24(2)ಕೋಪ್ಟಾ ಆಕ್ಟ – 2003 |
| 4. | ಚಡಚಣ | ಗುನ್ನಾ ನಂ:79/2021ಕಲಂ:272,420,273, ಐಪಿಸಿ & 20,24(2)ಕೋಪ್ಟಾ ಆಕ್ಟ – 2003 |
| 5. | ಚಡಚಣ | ಗುನ್ನಾ ನಂ:83/2021ಕಲಂ:272,420,273, ಐಪಿಸಿ & 20,24(2)ಕೋಪ್ಟಾ ಆಕ್ಟ – 2003 |
| | | **2022** |
| 1. | ಚಡಚಣ | ಗುನ್ನಾ ನಂ:57/2022ಕಲಂ:272,420,273, ಐಪಿಸಿ & 20,24(2), ಕೋಪ್ಟಾ ಆಕ್ಟ – 2003 |
| 2. | ಚಡಚಣ | ಗುನ್ನಾ ನಂ:58/2022ಕಲಂ:272,420,273, ಐಪಿಸಿ & 20,24(2), ಕೋಪ್ಟಾ ಆಕ್ಟ – 2003 |
| 3. | ಚಡಚಣ | ಗುನ್ನಾ ನಂ:62/2022ಕಲಂ:272,420,273, ಐಪಿಸಿ & 20,24(2), ಕೋಪ್ಟಾ ಆಕ್ಟ – 2003 |
| 4. | ಚಡಚಣ | ಗುನ್ನಾ ನಂ:66/2022ಕಲಂ:272,420,273, ಐಪಿಸಿ & 20,24(2), ಕೋಪ್ಟಾ ಆಕ್ಟ – 2003 |
| 5. | ಚಡಚಣ | ಗುನ್ನಾ ನಂ:73/2022ಕಲಂ:272,420,273, ಐಪಿಸಿ & 20,24(2), ಕೋಪ್ಟಾ ಆಕ್ಟ – 2003 |
| 6. | ಚಡಚಣ | ಗುನ್ನಾ ನಂ:80/2022ಕಲಂ:272,420,273, ಐಪಿಸಿ & 20,24(2), ಕೋಪ್ಟಾ ಆಕ್ಟ – 2003 |
| 7. | ಚಡಚಣ | ಗುನ್ನಾ ನಂ:82/2022ಕಲಂ:272,420,273, ಐಪಿಸಿ & 20,24(2), ಕೋಪ್ಟಾ ಆಕ್ಟ – 2003 |

## ಅನುಬಂಧ-2

### ಸನ್ -2019 ರಿಂದ 2022 ಆಗಸ್ಟ್ ವರೆಗೆ ದಾಖಲಾದ ಪ್ರಕರಣಗಳ ಮಾಹಿತಿ.

| ಕ್ರ.ಸಂ | ಠಾಣೆ | ವರ್ಷ | 78 ಕೆ.ಪಿ. ಆಕ್ಟ್ | 87 ಕೆ.ಪಿ. ಆಕ್ಟ್ | ಅಬಕಾರಿ ಪ್ರಕರಣಗಳು | ಗುಟಕಾ/ಮಾವಾ ತಯಾರಿಕೆ ಪ್ರಕರಣಗಳು | ಅಕ್ರಮ ಮರಳು ಪ್ರಕರಣಗಳು | ಅಕ್ರಮ ಆಯುಧ ಕಾಯ್ದೆ ಪ್ರಕರಣಗಳು |
|---|---|---|---|---|---|---|---|---|
| 1 | ಚಡಚಣ | 2019 | 07 | 08 | 09 | 01 | 21 | 02 |
| 2 | ಚಡಚಣ | 2020 | 07 | 07 | 11 | 02 | 03 | -- |
| 3 | ಚಡಚಣ | 2021 | 09 | 09 | 12 | 05 | 05 | 01 |
| 4 | ಚಡಚಣ | 2022 | 12 | 05 | 17 | 07 | 03 | -- |

# ಕರ್ನಾಟಕ ವಿಧಾನ ಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 55 |
| ಸದಸ್ಯರ ಹೆಸರು | : | ಶ್ರೀ ಕುಮಾರ ಬಂಗಾರಪ್ಪ ಎಸ್. (ಸೊರಬ) |
| ಉತ್ತರಿಸುವ ದಿನಾಂಕ | : | 13.09.2022 |
| ಉತ್ತರಿಸುವ ಸಚಿವರು | : | ಮಾನ್ಯ ಜಲಸಂಪನ್ಮೂಲ ಸಚಿವರು |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ನಂಜುಂಡಪ್ಪ ವರದಿಯ ಪ್ರಕಾರ ಹಿಂದುಳಿದ ತಾಲ್ಲೂಕಾಗಿರುವ ಸೊರಬ ತಾಲೂಕಿನಲ್ಲಿ ದಂಡಾವತಿ ಎಡ ಮತ್ತು ಬಲದಂಡೆ ಯೋಜನೆಯನ್ನು ಸರಣಿ ಬ್ಯಾರೇಜ್‌ಗಳ ಮೂಲಕ ಅನುಷ್ಠಾನ ಮಾಡುವ ಪ್ರಸ್ತಾವನೆ ಯಾವ ಹಂತದಲ್ಲಿದೆ; | ದಂಡಾವತಿ ಜಲಾಶಯ ಯೋಜನೆಯಡಿ ಸೊರಬ ತಾಲ್ಲೂಕಿನಲ್ಲಿ ದಂಡಾವತಿ ನದಿಯ ಅಡ್ಡಲಾಗಿ ಅಣೆಕಟ್ಟು ನಿರ್ಮಾಣ ಮಾಡಿ ಸೊರಬ ಮತ್ತು ಶಿಕಾರಿಪುರ ತಾಲ್ಲೂಕುಗಳ ಒಟ್ಟಾರೆ 6933 ಹೆಕ್ಟೇರ್ ಪ್ರದೇಶಕ್ಕೆ ನೀರಾವರಿ ಸೌಲಭ್ಯ ಕಲ್ಪಿಸಲು ಯೋಜಿಸಲಾಗಿರುತ್ತದೆ. ಯೋಜನೆಯ ವಿವರವಾದ ಯೋಜನಾ ವರದಿಗೆ ದಿನಾಂಕ:12.01.2009ರ ಸರ್ಕಾರದ ಆದೇಶದಲ್ಲಿ ರೂ.272.00 ಕೋಟಿ ಮೊತ್ತಕ್ಕೆ ಆಡಳಿತಾತ್ಮಕ ಅನುಮೋದನೆ ದೊರೆತಿರುತ್ತದೆ. ಅಣೆಕಟ್ಟು ನಿರ್ಮಾಣ ಹಾಗೂ ತತ್ಸಂಬಂಧ ಕಾಮಗಾರಿಯ ಟೆಂಡರ್‌ನ್ನು ದಿನಾಂಕ:14.10.2009ರಲ್ಲಿ 24 ತಿಂಗಳುಗಳ ಟೆಂಡರ್ ಅವಧಿಯೊಂದಿಗೆ ರೂ.142.20 ಕೋಟಿ ಮೊತ್ತಕ್ಕೆ ಗುತ್ತಿಗೆ ವಹಿಸಲಾಗಿರುತ್ತದೆ. ಅದರಂತೆ ಟೆಂಡರ್ ಅವಧಿಯು ದಿನಾಂಕ:13.10.2011 ರಂದು ಪೂರ್ಣಗೊಂಡಿರುತ್ತದೆ. ಆದರೆ ಸ್ಥಳೀಯರ ವಿರೋಧವಿರುವುದರಿಂದ ದಂಡಾವತಿ ಜಲಾಶಯ ಯೋಜನೆಯನ್ನು ಅನುಷ್ಠಾನಗೊಳಿಸಲು ಸಾಧ್ಯವಾಗಿರುವುದಿಲ್ಲ. ಆದ್ದರಿಂದ, ಟೆಂಡರ್‌ಅನ್ನು ರದ್ದುಗೊಳಿಸುವ ಕುರಿತಂತೆ ಪ್ರಸ್ತಾವನೆ ಸ್ವೀಕೃತವಾಗಿದ್ದು, ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಲಾಗುತ್ತಿದೆ.<br><br>ಸದರಿ ಯೋಜನೆಯ ಬದಲಾಗಿ, ತಾಲ್ಲೂಕಿನಲ್ಲಿ ಹರಿಯುತ್ತಿರುವ ವರದಾ ಮತ್ತು ದಂಡಾವತಿ ನದಿಗಳ ಆಯ್ದ ಸ್ಥಳಗಳಲ್ಲಿ ಬ್ರಿಡ್ಜ್‌ಕಮ್ ಬ್ಯಾರೇಜ್ ನಿರ್ಮಾಣ ಮಾಡುವುದರ ಮೂಲಕ ನೀರನ್ನು ಶೇಖರಣೆ ಮಾಡಲು ಹಾಗೂ ಜಂಗಿನ ಕೊಪ್ಪ ಗ್ರಾಮದ ಬಳಿ ದಂಡಾವತಿ ನದಿ ಅಡ್ಡಲಾಗಿ ಬ್ರಿಡ್ಜ್‌ಕಮ್ ಬ್ಯಾರೇಜ್ ನಿರ್ಮಾಣ ಮಾಡಿ ಸುಮಾರು 23.85 ಕಿ.ಮೀ ಉದ್ದದ ಬಲದಂಡೆ ಕಾಲುವೆ ಹಾಗೂ ಸುಮಾರು 14.06 ಕಿ.ಮೀ ಉದ್ದದ ಎಡದಂಡೆ ಕಾಲುವೆ ನಿರ್ಮಾಣ ಮಾಡಿ ನೀರಾವರಿ ಸೌಲಭ್ಯ ಒದಗಿಸುವ ಯೋಜನೆಯ ಪ್ರಾಥಮಿಕ ವರದಿಯನ್ನು ತಯಾರಿಸಲಾಗಿರುತ್ತದೆ. ಪ್ರಸ್ತಾವನೆಯನ್ನು ತಾಂತ್ರಿಕ ಶಕ್ಯತೆ ಹಾಗೂ ಅನುದಾನದ ಲಭ್ಯತೆಯನುಸಾರ ಪರಿಶೀಲಿಸಲಾಗುವುದು. |
| ಆ) | ದಂಡಾವತಿ ಯೋಜನೆಯನ್ನು ಪ್ರಸ್ತುತ ಆರ್ಥಿಕ ವರ್ಷದಲ್ಲಿ ಅನುಷ್ಠಾನ ಮಾಡಲು, ಕಾಮಗಾರಿ ಮಂಜೂರಾತಿ ನೀಡಿ, ಅನುದಾನ ಬಿಡುಗಡೆ ಮಾಡಲಾಗುವುದೇ; | |
| ಇ) | ವರದಾ ನದಿಯ ವ್ಯಾಪ್ತಿಯಲ್ಲಿ ಗುಡವಿ ಹಾಗೂ ಕೆರೆಹಳ್ಳಿ ಏತ ನೀರಾವರಿ ಯೋಜನೆ, ಕಡಸೂರು, ಹೊಳೆ ಮರೂರು ಹಾಗೂ ಹುಲೇಮರಡಿ ಬ್ರಿಡ್ಜ್‌ಕಮ್ ಬ್ಯಾರೇಜ್ ಕಾಮಗಾರಿಗಳನ್ನು ಯಾವಾಗ ಪ್ರಾರಂಭಿಸಲಾಗುವುದು; | (1) ವರದಾ ನದಿಗೆ ಕೆರೆಹಳ್ಳಿ ಗ್ರಾಮದ ಹತ್ತಿರ ಕೆರೆಹಳ್ಳಿ ಏ.ನೀ.ಯೋಜನೆ (2) ವರದಾ ನದಿಗೆ ಗುಡವಿ ಗ್ರಾಮದಲ್ಲಿ ಗುಡವಿ ಏ.ನೀ.ಯೋಜನೆ ಮತ್ತು (3) ವರದಾ ಮತ್ತು ದಂಡಾವತಿ ನದಿಗಳಿಗೆ ಅಡ್ಡಲಾಗಿ ಕಡಸೂರು ಬಳಿ ಬ್ಯಾರೇಜ್ ಹಾಗೂ ಹೊಳೆಮರೂರು, ಹುಲೇಮರಡಿ ಮತ್ತು ಇನ್ನಿತರೇ ಆಯ್ದ ಸ್ಥಳಗಳಲ್ಲಿ ಬ್ರಿಡ್ಜ್‌ಕಮ್ ಬ್ಯಾರೇಜ್ ನಿರ್ಮಾಣ ಮಾಡಲು ಉದ್ದೇಶಿಸಲಾಗಿದ್ದು, ಸದರಿ ಯೋಜನೆಗಳ ವಿವರವಾದ ಯೋಜನಾ ವರದಿಗಳನ್ನು ತಯಾರಿಸಲಾಗುತ್ತಿದೆ. |

| ಈ) | ಕಚವಿ ಏತ ನೀರಾವರಿ ಯೋಜನೆ ಕಾಮಗಾರಿ ವಿಳಂಬವಾಗಿದ್ದರಿಂದ ರೈತರಿಗೆ ಯೋಜನೆ ತಲುಪಿಸಲು ಇದುವರೆಗೆ ಸಾಧ್ಯವಾಗದೆ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ? | ಕಚವಿ ಏತ ನೀರಾವರಿ ಯೋಜನೆಯಡಿ ವರದಾ ನದಿಯಿಂದ ನೀರನ್ನೆತ್ತಿ ಸೊರಬ ತಾಲ್ಲೂಕಿನ 21 ಕೆರೆಗಳನ್ನು ತುಂಬಿಸುವ ಯೋಜನೆಯ ಈಗಾಗಲೇ ಅನುಮೋದಿತ ಅಂದಾಜು ಪಟ್ಟಿಯಲ್ಲಿನ ಪೈಪ್‌ನ ವಿನ್ಯಾಸವನ್ನು ಬದಲಾಯಿಸಿ, ಹೆಚ್ಚುವರಿ ಕೆರೆಗಳಿಗೆ ನೀರು ತುಂಬಿಸಲು ಸ್ಥಳೀಯವಾಗಿ ಬೇಡಿಕೆ ಬಂದಿದ್ದರಿಂದ, ಕಾಮಗಾರಿಯನ್ನು ಟೆಂಡರ್ ಕಾಲಾವಧಿಯಲ್ಲಿ ಪೂರ್ಣಗೊಳಿಸಲು ಸಾಧ್ಯವಾಗಿರುವುದಿಲ್ಲ ಆದರೆ ಸದರಿ ಗುತ್ತಿಗೆಯು ಟರ್ನ್‌ಕೀ ಆಧಾರದ ಮೇಲೆ ವಹಿಸಿರುವ ಹಿನ್ನೆಲೆಯಲ್ಲಿ ಹೆಚ್ಚುವರಿ ಕೆರೆಗಳಿಗೆ ನೀರು ತುಂಬಿಸಲು ಪೈಪ್‌ನ ವಿನ್ಯಾಸ ಬದಲಾವಣೆ ಮಾಡಲು ಸಾಧ್ಯವಾಗುವುದಿಲ್ಲವೆಂದು ಸ್ಥಳೀಯರಿಗೆ ಮನವೊಲಿಸಿ ಕಾಮಗಾರಿಯನ್ನು ಅನುಮೋದಿತ ವಿನ್ಯಾಸದಂತೆಯೇ ಪೂರ್ಣಗೊಳಿಸಲು ಗುತ್ತಿಗೆದಾರರಿಗೆ ಸೂಚಿಸಲಾಗಿರುತ್ತದೆ. ಅದಲ್ಲದೆ ಕೋವಿಡ್-19 ಕಾರಣ ಲಾಕ್‌ಡೌನ್ ಘೋಷಿಸಿದ್ದರಿಂದ ಹಾಗೂ ಮಳೆಯ ಕಾರಣದಿಂದ ಕಾಮಗಾರಿಯ ಪ್ರಗತಿಯು ಕುಂಠಿತವಾಗಿರುತ್ತದೆ.<br><br>ಪ್ರಸ್ತುತ ಸದರಿ ಕಾಮಗಾರಿಯು ಪ್ರಗತಿಯಲ್ಲಿದ್ದು ಜಾಕ್‌ವೆಲ್/ಪಂಪ್‌ಹೌಸ್ ನಿರ್ಮಾಣವು ಶೇ.60 ರಷ್ಟು ಪೂರ್ಣಗೊಳಿಸಿದ್ದು, ಪೈಪ್‌ಲೈನ್ ಅಳವಡಿಕೆ ಕಾಮಗಾರಿಯು ಶೇ.80 ರಷ್ಟು ಪೂರ್ಣಗೊಳಿಸಲಾಗಿದ್ದು, ಇನ್ನುಳಿದಂತೆ ವಿದ್ಯುತ್ ಸಂಪರ್ಕಕ್ಕಾಗಿ ಟ್ರಾನ್ಸ್‌ಮಿಷನ್ ಲೈನ್‌ಕಾಮಗಾರಿ ಪ್ರಗತಿಯಲ್ಲಿರುತ್ತದೆ. ಅಲ್ಲದೇ ಗುತ್ತಿಗೆದಾರರಿಗೆ ಶೀಘ್ರವಾಗಿ ಕಾಮಗಾರಿಯನ್ನು ಪೂರ್ಣಗೊಳಿಸಲು ವಿವಿಧ ಹಂತಗಳಲ್ಲಿ ನೋಟಿಸ್ ಜಾರಿಗೊಳಿಸಲಾಗಿದ್ದು, ಕಾಮಗಾರಿಯನ್ನು ಶೀಘ್ರದಲ್ಲಿಯೇ ಪೂರ್ಣಗೊಳಿಸಲಾಗುವುದು. |
|---|---|---|

**ಸಂಖ್ಯೆ: ಜಸಂಇ 135 ಎಂಎಲ್ಎ 2022**

**(ಗೋವಿಂದ ಎಂ.ಕಾರಜೋಳ)**
ಜಲಸಂಪನ್ಮೂಲ ಸಚಿವರು

## ಕರ್ನಾಟಕ ವಿಧಾನಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 57 |
| ಮಾನ್ಯ ಸದಸ್ಯರ ಹೆಸರು | ಶ್ರೀ ಕುಮಾರ ಬಂಗಾರಪ್ಪ ಎಸ್. (ಸೊರಬ) |
| ಉತ್ತರಿಸಬೇಕಾದವರು | ಅಬಕಾರಿ ಸಚಿವರು |
| ಉತ್ತರಿಸಬೇಕಾದ ದಿನಾಂಕ | 13.09.2022 |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಸೊರಬ ಪಟ್ಟಣದ ಪ್ರಮುಖ ದೇವಸ್ಥಾನಗಳಿರುವ ಪ್ರದೇಶದಲ್ಲಿ, ಅಬಕಾರಿ ಇಲಾಖೆಯ ಅಧಿಕಾರಿಗಳು ಕಾನೂನಿಗೆ ವಿರುದ್ಧವಾಗಿ ಮದ್ಯದ ಅಂಗಡಿಯನ್ನು ತೆರೆಯಲು ಅವಕಾಶ ಮಾಡಿಕೊಟ್ಟಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ |
| ಆ) | ಬಂದಿದ್ದಲ್ಲಿ, ಸದರಿ ಮದ್ಯದ ಅಂಗಡಿಯನ್ನು ತೆರವುಗೊಳಿಸಲು ಸರ್ಕಾರ ಇದುವರೆಗೆ ಯಾವ ರೀತಿಯ ಕ್ರಮಗಳನ್ನು ಕೈಗೊಂಡಿದೆ; | ಅಂಬಿಕಾ ವೈನ್ಸ್, ಸಿಎಲ್-2 ಸನ್ನದನ್ನು ಯಾವುದೇ ಆಕ್ಷೇಪಣೆ ಇಲ್ಲದ ಕಾರಣ ದಿನಾಂಕ:19.03.2020ರಂದು ಸ್ಥಳಾಂತರಿಸಲಾಗಿರುತ್ತದೆ. ನಂತರದಲ್ಲಿ ದಿನಾಂಕ:05.03.2022ರಂದು ಸಾರ್ವಜನಿಕರಿಂದ ದೂರು ಸ್ವೀಕೃತಗೊಂಡ ಹಿನ್ನೆಲೆಯಲ್ಲಿ ಶಿವಮೊಗ್ಗ ಜಿಲ್ಲೆಯ ಅಬಕಾರಿ ಉಪ ಆಯುಕ್ತರು ಆದೇಶ ಸಂ: ಇಎಕ್ಸ್‌ಇ/ಐಎಂಎಲ್/ಎಸ್‌ಒಬಿ/ಸಿಎಲ್-2/08/2020-21 ದಿ:19-03-2022ರಲ್ಲಿ ಸನ್ನದನ್ನು ಬೇರೆ ಆಕ್ಷೇಪಣಾ ರಹಿತ ಸ್ಥಳಕ್ಕೆ ಸ್ಥಳಾಂತರಿಸಲು ಆದೇಶ ಮಾಡಿರುತ್ತಾರೆ. ಸನ್ನದುದಾರರು ಸದರಿ ಆದೇಶದ ವಿರುದ್ದ ಅಬಕಾರಿ ಆಯುಕ್ತರ ನ್ಯಾಯಾಲಯದಲ್ಲಿ ಮೇಲ್ಮನವಿ ಸಲ್ಲಿಸಿದ್ದು, ಅಬಕಾರಿ ಆಯುಕ್ತರ ಮೇಲ್ಮನವಿ ಪ್ರಾಧಿಕಾರವು ಅಪೀಲ್ ನಂ.ಇಸಿಎಸ್/10/ಎಪಿಪಿ/2022.ದಿನಾಂಕ:7/7/2022ರ ಆದೇಶದಲ್ಲಿ ಮೇಲ್ಮನವಿಯನ್ನು ವಜಾಗೊಳಿಸಿರುತ್ತದೆ. |

| | | |
|---|---|---|
| | | ಮೇಲ್ಮನವಿದಾರರು/ಸನ್ನದುದಾರರು ಅಬಕಾರಿ ಉಪ ಆಯುಕ್ತರು ಶಿವಮೊಗ್ಗ ಜಿಲ್ಲೆ ಹಾಗೂ ಅಬಕಾರಿ ಆಯುಕ್ತರ ಮೇಲ್ಮನವಿ ಪ್ರಾಧಿಕಾರದ ಆದೇಶದ ವಿರುದ್ಧ ಮಾನ್ಯ ಕರ್ನಾಟಕ ಮೇಲ್ಮನವಿ ನ್ಯಾಯಾಧೀಕರಣ, ಬೆಂಗಳೂರು ಇಲ್ಲಿ ಮೇಲ್ಮನವಿ ಸಂಖ್ಯೆ:292/2022 ರಲ್ಲಿ ಮೇಲ್ಮನವಿಯನ್ನು ಸಲ್ಲಿಸಿರುತ್ತಾರೆ.<br><br>ಕರ್ನಾಟಕ ಮೇಲ್ಮನವಿ ನ್ಯಾಯಾಧೀಕರಣದ ಹಂತದಲ್ಲಿ ವಿಚಾರಣೆ ಚಾಲ್ತಿಯಲ್ಲಿರಬೇಕಾದರೆ ಸನ್ನದುದಾರರು ಮಾನ್ಯ ಉಚ್ಚ ನ್ಯಾಯಾಲಯದಲ್ಲಿ ಡಬ್ಲ್ಯೂಪಿ ಸಂಖ್ಯೆ: 14259/2022ನ್ನು ದಾಖಲಿಸಿದ್ದು, ಮಾನ್ಯ ಉಚ್ಚ ನ್ಯಾಯಾಲಯವು ದಿನಾಂಕ:19/07/2022ರ ಮಧ್ಯಂತರ ಆದೇಶದಲ್ಲಿ ಮುಂದಿನ ವಿಚಾರಣಾ ದಿನಾಂಕದವರೆಗೆ ಅದೇ ಸ್ಥಳದಲ್ಲಿ ಸನ್ನದು ನಡೆಸಲು ಅನುಮತಿ ನೀಡುವಂತೆ ನಿರ್ದೇಶಿಸಿ ತಡೆಯಾಜ್ಞೆ ನೀಡಿದ್ದು, ದಿನಾಂಕ:29/07/2022ರ ಮಧ್ಯಂತರ ಆದೇಶದಲ್ಲಿ ಮುಂದಿನ ವಿಚಾರಣಾ ದಿನಾಂಕದವರೆಗೆ ತಡೆಯಾಜ್ಞೆಯನ್ನು ವಿಸ್ತರಿಸಿ ಆದೇಶಿಸಿರುತ್ತದೆ. ಮುಂದಿನ ವಿಚಾರಣೆಯ ದಿನಾಂಕ ನಿಗದಿಯಾಗಿರುವುದಿಲ್ಲ. |
| ಇ) | ಸರ್ಕಾರದ ಕಾನೂನಿಗೆ ಗೌರವ ಕೊಡದೆ, ಸಾರ್ವಜನಿಕರ ಮನವಿಯನ್ನು ಪರಿಗಣಿಸದೇ ಮದ್ಯದ ಅಂಗಡಿಯನ್ನು ತೆರೆಯಲು ಅವಕಾಶ ಮಾಡಿಕೊಟ್ಟಿರುವ ಅಧಿಕಾರಿಗಳ ಮೇಲೆ ಇದುವರೆಗೆ ಯಾವ ರೀತಿಯ ಕ್ರಮಗಳನ್ನು ಜರುಗಿಸಲಾಗಿದೆ? | ಕರ್ನಾಟಕ ಅಬಕಾರಿ (ಸನ್ನದುಗಳ ಸಾಮಾನ್ಯ ಷರತ್ತುಗಳು) ನಿಯಮಗಳು, 1967ರ ನಿಯಮ 5ರನ್ವಯ ಆಕ್ಷೇಪಣಾ ಸ್ಥಳವಾಗಿದ್ದರೂ ಸನ್ನದನ್ನು ನಡೆಸಲು ಅವಕಾಶ ಮಾಡಿಕೊಟ್ಟಿರುವ ಪ್ರಕರಣದಲ್ಲಿನ ಮೂರು ಅಧಿಕಾರಿಗಳ ವಿರುದ್ಧ ಕ್ರಮ ಕೈಗೊಳ್ಳಲು ಶಿಸ್ತು ವಿಭಾಗದಲ್ಲಿ ವಿಷಯವು ಪರಿಶೀಲನಾ ಹಂತದಲ್ಲಿರುತ್ತದೆ. |

**ಆಇ 68 ಇಎಲ್‌ಕ್ಯೂ 2022**

(ಕೆ. ಗೋಪಾಲಯ್ಯ)
ಅಬಕಾರಿ ಸಚಿವರು

## ಕರ್ನಾಟಕ ವಿಧಾನ ಸಭೆ

1) ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 58
2) ಮಾನ್ಯ ಸದಸ್ಯರ ಹೆಸರು : ಶ್ರೀ ಕುಮಾರ ಬಂಗಾರಪ್ಪ ಎಸ್. (ಸೊರಬ)
3) ಉತ್ತರಿಸುವ ದಿನಾಂಕ : 13.09.2022
4) ಉತ್ತರಿಸುವ ಸಚಿವರು : ಗೃಹ ಸಚಿವರು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ನಂಜುಡಪ್ಪ ವರದಿಯ ಪ್ರಕಾರ ಹಿಂದುಳಿದ ತಾಲ್ಲೂಕಾಗಿರುವ ಸೊರಬ ತಾಲ್ಲೂಕಿನ, ಸೊರಬ ಪಟ್ಟಣದ ಪೊಲೀಸ್ ಠಾಣೆಯ ಕಟ್ಟಡದ ದುರಸ್ತಿ ಮತ್ತು ಅಭಿವೃದ್ಧಿ ಕಾಮಗಾರಿಗೆ ಅನುದಾನ ಬಿಡುಗಡೆ ಮಾಡುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ: | ಸೊರಬ ತಾಲ್ಲೂಕಿನ, ಸೊರಬ ಪಟ್ಟಣದ ಪೊಲೀಸ್ ಠಾಣೆಯ ಕಟ್ಟಡದ ದುರಸ್ತಿ ಮತ್ತು ಅಭಿವೃದ್ಧಿ ಕಾಮಗಾರಿ ಪ್ರಸ್ತಾವನೆ ಸರ್ಕಾರದ ಗಮನಕ್ಕೆ ಬಂದಿರುತ್ತದೆ. |
| ಆ) | ಈ ಠಾಣೆಯ ಮಳೆಗಾಲದಲ್ಲಿ ಸೋರುವುದನ್ನು ತಡೆಯಲು, ಸುರಕ್ಷತೆಯ ದೃಷ್ಟಿಯಿಂದ ಕಾಂಪೌಂಡ್ ನಿರ್ಮಾಣ, ಇನ್ನಿತರ ದುರಸ್ತಿ ಕಾಮಗಾರಿಯ ಅವಶ್ಯಕತೆ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ: ಬಂದಿದ್ದಲ್ಲಿ, ಕಾಮಗಾರಿಗೆ ಮಂಜೂರಾತಿ ನೀಡಿ, ಅನುದಾನವನ್ನು ಯಾವಾಗ ಬಿಡುಗಡೆ ಮಾಡಲಾಗುವುದು: | ಸೊರಬ ಪೊಲೀಸ್ ಠಾಣೆಯ ಕಟ್ಟಡವು 2002ನೇ ಸಾಲಿನಲ್ಲಿ ನಿರ್ಮಾಣವಾಗಿದ್ದು, ಸುಸ್ಥಿತಿಯಲ್ಲಿರುತ್ತದೆ. ಇತ್ತೀಚೆಗೆ ಸದರಿ ಕಟ್ಟಡದ ಎಸ್.ಹೆಚ್.ಓ. ಕೂರುವ ಜಾಗ ಹಾಗೂ ಠಾಣಾ ಬರಹಗಾರರ ಕೊಠಡಿಯು ಸೋರುತ್ತಿರುತ್ತದೆ. ಸದರಿ ಪೊಲೀಸ್ ಠಾಣೆಯ ಎದುರುಗಡೆ ಮತ್ತು ಎಡಭಾಗದ ಅರ್ಧಭಾಗ ಮಾತ್ರ ಕಾಂಪೌಂಡ್ ನಿರ್ಮಾಣವಾಗಿದ್ದು, ಉಳಿದ ಕಡೆ ಕಾಂಪೌಂಡ್ ನಿರ್ಮಾಣವಾಗಬೇಕಾಗಿರುತ್ತದೆ. ಈ ಕುರಿತಂತೆ ಸದರಿ ಪೊಲೀಸ್ ಠಾಣೆಯ ದುರಸ್ಥಿ, ಕಾಂಪೌಂಡ್ ನಿರ್ಮಾಣ ಹಾಗೂ ಇನ್ನಿತರೆ ದುರಸ್ಥಿಗೆ ಸಂಬಂಧಿಸಿದಂತೆ ಪೊಲೀಸ್ ಅಧೀಕ್ಷಕರು, ಶಿವಮೊಗ್ಗ ಜಿಲ್ಲೆ ರವರ ಪ್ರಸ್ತಾವನೆ ಅನ್ವಯ ದಿನಾಂಕ:12-09-2022ರಲ್ಲಿ 20 ಲಕ್ಷಗಳಿಗೆ ಆಡಳಿತಾತ್ಮಕ ಅನುಮೋದನೆ ನೀಡಿ ಮಂಜೂರು ಮಾಡಲಾಗಿರುತ್ತದೆ. |
| ಇ) | ನೂತನವಾಗಿ ಪಟ್ಟಣ ಪಂಚಾಯಿತಿಯಾಗಿ ಮೇಲ್ದರ್ಜೆಗೇರಿಸಿರುವ ಆನವಟ್ಟಿ ಪಟ್ಟಣ ಪಂಚಾಯಿತಿ ವ್ಯಾಪ್ತಿಯಲ್ಲಿ ನೂತನ ಪೊಲೀಸ್ ಠಾಣೆ ನಿರ್ಮಿಸಲು ಭೂಮಿ ಮಂಜೂರಾಗಿದ್ದು, ಇಲ್ಲಿ ನೂತನ ಪೊಲೀಸ್ ಠಾಣೆ ಕಟ್ಟಡ ಮಂಜೂರಾತಿ ಮಾಡುವ ಯೋಜನೆಯನ್ನು ಸರ್ಕಾರ ಹೊಂದಿದೆಯೇ? | ಆನವಟ್ಟಿ ಪೊಲೀಸ್ ಠಾಣೆಯು 2005ನೇ ಸಾಲಿನಲ್ಲಿ ನಿರ್ಮಾಣವಾಗಿದ್ದು, ಕಟ್ಟಡವು ಸುಸ್ಥಿತಿಯಲ್ಲಿರುತ್ತದೆ.<br><br>ಆನವಟ್ಟಿ ಪೊಲೀಸ್ ಠಾಣಾ ವ್ಯಾಪ್ತಿಯಲ್ಲಿ ಪೊಲೀಸ್ ಪೆರೇಡ್ ಮೈದಾನ, ಪೊಲೀಸ್ ವಸತಿಗೃಹ ಹಾಗೂ ಪೊಲೀಸ್ ಸಭಾ ಭವನ ಮತ್ತು ಬಂದೋಬಸ್ತ್ ಸಮಯದಲ್ಲಿ ಹೊರಠಾಣೆ ಮತ್ತು ಜಿಲ್ಲೆಗಳಿಂದ ಕರ್ತವ್ಯ ನಿರ್ವಹಿಸಲು ಬಂದ ಸಿಬ್ಬಂದಿಗಳಿಗೆ ಪೊಲೀಸ್ ವಿಶ್ರಾಂತಿ ಗೃಹ ನಿರ್ಮಾಣಕ್ಕೆ ಜಮೀನು ಮಂಜೂರಾತಿ ಮಾಡಲು ಕೋರಿ ಪಿಎಸ್ಐ, ಆನವಟ್ಟಿ ಠಾಣೆ ರವರು ಸಂಬಂಧಪಟ್ಟ ಇಲಾಖೆಗೆ ಮನವಿ ಸಲ್ಲಿಸಿದ್ದು, ಈ ಸಂಬಂಧ ಮಾನ್ಯ ಜಿಲ್ಲಾಧಿಕಾರಿಗಳು, ಶಿವಮೊಗ್ಗ ಜಿಲ್ಲೆ ರವರ ಪತ್ರ ಸಂಖ್ಯೆ: ಎಲ್ಎನ್ಡಿ (2)/ ಎಲ್ಜಿ-2/193/2022 (ಇ-103034), ದಿನಾಂಕ: 29.06.2022 ರಲ್ಲಿ ಸೊರಬ ತಾಲ್ಲೂಕು ಆನವಟ್ಟಿ ಹೋಬಳಿ ಚಿಕ್ಕ ಇಡಗೋಡು ಗ್ರಾಮದ ಸ.ನಂ.; 81 ರಲ್ಲಿ 2-00 ಎಕರೆ ಜಮೀನನ್ನು ಆನವಟ್ಟಿ ಪೊಲೀಸ್ ಠಾಣೆ ಕಟ್ಟಡ ನಿರ್ಮಾಣದ ಉದ್ದೇಶಕ್ಕೆ ಪೊಲೀಸ್ ಇಲಾಖೆಗೆ ಕಾಯ್ದಿರಿಸಿ ಆದೇಶಿಸಿರುತ್ತಾರೆ.<br><br>ಸದರಿ ಜಮೀನಿನ ದಾಖಲಾತಿಗಳು ಪೊಲೀಸ್ ಇಲಾಖೆಯ ಹೆಸರಿಗೆ ಆದ ನಂತರ ಆನವಟ್ಟಿ ಪೊಲೀಸ್ ಠಾಣೆಯ ಕಟ್ಟಡಕ್ಕೆ ನೂತನ ಕಟ್ಟಡದ ಅವಶ್ಯಕತೆಯನ್ನು ಪರಿಶೀಲಿಸಿ, ಕ್ರಮಕೈಗೊಳ್ಳಲಾಗುವುದು. |

**ಸಂಖ್ಯೆ: ಹೆಚ್‌ಡಿ 79 ಪಿಬಿಎಲ್ 2022(ಭಾ)**

(ಆರಗ ಜ್ಞಾನೇಂದ್ರ)
ಗೃಹ ಸಚಿವರು

## ಕರ್ನಾಟಕ ವಿಧಾನ ಸಭೆ

| | | |
|---|---|---|
| ಸದಸ್ಯರ ಹೆಸರು | : | ಶ್ರೀ.ಅಪ್ಪಚ್ಚು (ರಂಜನ್) ಎಂ.ಪಿ (ಮಡಿಕೇರಿ) |
| ಚುಕ್ಕೆ ರಹಿತ ಪ್ರಶ್ನೆ ಸಂಖ್ಯೆ | : | 581 |
| ಉತ್ತರ ದಿನಾಂಕ | : | 13.09.2022 |
| ಉತ್ತರಿಸುವವರು | : | ಮಾನ್ಯ ಮುಖ್ಯಮಂತ್ರಿಗಳು |

<table>
<tr><th>ಕ್ರ.ಸಂ</th><th>ಪ್ರಶ್ನೆ</th><th>ಉತ್ತರ</th></tr>
<tr><td>ಅ)</td><td>ಕೊಡಗು ಜಿಲ್ಲೆಯಲ್ಲಿ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಂಜಿನಿಯರಿಂಗ್ ವಿಭಾಗದಿಂದ ಕಳೆದ ಮೂರು ವರ್ಷಗಳಿಂದ ಎಷ್ಟು ಶುದ್ಧ ಕುಡಿಯುವ ನೀರಿನ ಘಟಕಗಳು ಮಂಜೂರಾಗಿವೆ; ಈ ಪೈಕಿ ಎಷ್ಟು ಘಟಕಗಳು ಚಾಲ್ತಿಯಲ್ಲಿವೆ; ಎಷ್ಟು ದುರಸ್ತಿಯಲ್ಲಿವೆ; (ಕ್ಷೇತ್ರವಾರು ವಿವರ ನೀಡುವುದು).</td><td>ಗ್ರಾಮೀಣ ಕುಡಿಯುವ ನೀರು ಮತ್ತು ನೈರ್ಮಲ್ಯ ಇಲಾಖೆಯಿಂದ ಕೊಡಗು ಜಿಲ್ಲೆಯ ವ್ಯಾಪ್ತಿಗೆ ಕಳೆದ ಮೂರು ವರ್ಷಗಳಿಂದ ಯಾವುದೇ ಶುದ್ಧ ಕುಡಿಯುವ ನೀರಿನ ಘಟಕ ಮಂಜೂರಾಗಿರುವುದಿಲ್ಲ.</td></tr>
<tr><td>ಆ)</td><td>ಜಲ ಜೀವನ್ ಮಿಷನ್ ಯೋಜನೆಯಡಿಯಲ್ಲಿ ಕೊಡಗು ಜಿಲ್ಲೆಗೆ ಕಳೆದ ಮೂರು ವರ್ಷಗಳಿಂದ ಎಷ್ಟು ಅನುದಾನ ಮಂಜೂರಾಗಿದೆ. ಎಷ್ಟು ಹಣ ಬಿಡುಗಡೆಯಾಗಿದೆ; ಯಾವ ಯಾವ ಕಾಮಗಾರಿ ಕೈಗೊಳ್ಳಲಾಗಿದೆ; (ಕ್ಷೇತ್ರವಾರು ಪೂರ್ಣ ವಿವರ ನೀಡುವುದು).</td><td>ಕೊಡಗು ಜಿಲ್ಲೆಯಲ್ಲಿ ಕಳೆದ ಮೂರು ವರ್ಷಗಳಲ್ಲಿ ಜೆ.ಜೆ.ಎಂ ಯೋಜನೆಯಡಿಯಲ್ಲಿ ಗ್ರಾಮೀಣ ಪ್ರದೇಶಗಳ ಜನವಸತಿಗಳಲ್ಲಿನ ಎಲ್ಲಾ ಮನೆಗಳಿಗೆ ಕಾರ್ಯಾತ್ಮಕ ನಳ ನೀರು ಸಂಪರ್ಕ ಒದಗಿಸುವ ಕಾಮಗಾರಿಗಳನ್ನು ಕೈಗೊಳ್ಳಲಾಗುತ್ತಿದೆ.<br><br>ಸದರಿ ಕಾಮಗಾರಿಗಳಿಗೆ ಕ್ಷೇತ್ರವಾರು ಮಂಜೂರಾದ ಬಿಡುಗಡೆಯಾದ ಅನುದಾನದ ವಿವರಗಳು ಈ ಕೆಳಗಿನಂತಿವೆ.<br><br>ಜೆ.ಜೆ.ಎಂಬ್ಯಾಚ್-1ಯೋಜನೆ (ರೂ. ಲಕ್ಷಗಳಲ್ಲಿ)
<table>
<tr><th>ಕ್ರ.ಸಂ</th><th>ವಿಧಾನಸಭಾ ಕ್ಷೇತ್ರ</th><th>ಕೈಗೊಂಡ ಕಾಮಗಾರಿಗಳ ಸಂಖ್ಯೆ</th><th>ಮಂಜೂರಾದ ಅನುದಾನ</th><th>ಬಿಡುಗಡೆ ಯಾದ ಅನುದಾನ</th><th>ಷರಾ</th></tr>
<tr><td>1</td><td>ಮಡಿಕೇರಿ</td><td>135</td><td>6444.76</td><td>3844.33</td><td></td></tr>
<tr><td>2</td><td>ವಿರಾಜಪೇಟೆ</td><td>53</td><td>4655.15</td><td>1849.23</td><td></td></tr>
<tr><td></td><td>ಬ್ಯಾಚ್-1 ಒಟ್ಟು</td><td>188</td><td>11099.91</td><td>5693.56</td><td></td></tr>
</table>
ಜೆ.ಜೆ.ಎಂಬ್ಯಾಚ್-2ಯೋಜನೆ (ರೂ. ಲಕ್ಷಗಳಲ್ಲಿ)
<table>
<tr><th>ಕ್ರ.ಸಂ</th><th>ವಿಧಾನ ಸಭಾ ಕ್ಷೇತ್ರ</th><th>ಕೈಗೊಂಡ ಕಾಮಗಾರಿಗಳ ಸಂಖ್ಯೆ</th><th>ಮಂಜೂರಾದ ಅನುದಾನ</th><th>ಬಿಡುಗಡೆ ಯಾದ ಅನುದಾನ</th><th>ಷರಾ</th></tr>
<tr><td>1</td><td>ಮಡಿಕೇರಿ</td><td>71</td><td>3290.50</td><td>167.47</td><td></td></tr>
<tr><td>2</td><td>ವಿರಾಜಪೇಟೆ</td><td>64</td><td>4776.23</td><td>120.06</td><td></td></tr>
<tr><td></td><td>ಬ್ಯಾಚ್-2 ಒಟ್ಟು</td><td>135</td><td>8066.73</td><td>287.53</td><td></td></tr>
</table>
</td></tr>
</table>

<table>
<tr><td></td><td></td><td>ಜೆ.ಜೆ.ಎಂಬ್ಯಾಚ್-3ಯೋಜನೆ (ರೂ. ಲಕ್ಷಗಳಲ್ಲಿ)
<table>
<tr><th>ಕ್ರ. ಸಂ</th><th>ವಿಧಾನ ಸಭಾ ಕ್ಷೇತ್ರ</th><th>ಕೈಗೊಂಡ ಕಾಮಗಾರಿಗಳ ಸಂಖ್ಯೆ</th><th>ಮಂಜೂರಾದ ಅನುದಾನ (ರೂ. ಲಕ್ಷಗಳಲ್ಲಿ)</th><th>ಬಿಡುಗಡೆಯಾದ ಅನುದಾನ (ರೂ. ಲಕ್ಷಗಳಲ್ಲಿ)</th><th>ಷರಾ</th></tr>
<tr><td>1</td><td>ಮಡಿಕೇರಿ</td><td>70</td><td>4125.03</td><td>28.73</td><td></td></tr>
<tr><td>2</td><td>ವಿರಾಜಪೇಟೆ</td><td>70</td><td>7768.25</td><td>123.76</td><td></td></tr>
<tr><td></td><td>ಬ್ಯಾಚ್-3 ಒಟ್ಟು</td><td>140</td><td>11893.28</td><td>152.49</td><td></td></tr>
</table>
</td></tr>
<tr><td>ಇ)</td><td>ಕೊಡಗು ಜಿಲ್ಲೆಯಲ್ಲಿ ಉಂಟಾದ ಮಳೆಯಿಂದ ಗ್ರಾಮೀಣ ರಸ್ತೆಗಳು ತುಂಬಾ ಹಾಳಾಗಿದ್ದು, ಇದರ ದುರಸ್ತಿಗೆ ಸರ್ಕಾರ ಯಾವ ಯಾವ ಯೋಜನೆಯಡಿಯಲ್ಲಿ ಕಳೆದ ಮೂರು ವರ್ಷಗಳಿಂದ ಎಷ್ಟೇಷ್ಟು ಅನುದಾನ ಬಿಡುಗಡೆ ಮಾಡಿದೆ; (ಕ್ಷೇತ್ರವಾರು ವಿವರ ನೀಡುವುದು).</td><td rowspan="2">2019-20, 2020-21 ಮತ್ತು 2021-22ನೇ ಸಾಲಿನಲ್ಲಿ ಕೊಡಗು ಜಿಲ್ಲೆಯಲ್ಲಿ ಉಂಟಾದ ಮಳೆ ಮತ್ತು ಪ್ರವಾಹದಿಂದ ಹಾನಿಗೊಳಗಾದ ರಸ್ತೆ ಮತ್ತು ಸೇತುವೆಗಳನ್ನು ದುರಸ್ತಿ ಪಡಿಸಲು ಮಳೆ ಪರಿಹಾರದ ಕಾರ್ಯಕ್ರಮ ಮತ್ತು ಮಾನ್ಯ ಮುಖ್ಯಮಂತ್ರಿಗಳ ವಿಶೇಷ ಮಂಜೂರಾತಿ ಕಾರ್ಯಕ್ರಮದಡಿ ಅನುಬಂಧದಲ್ಲಿರುವಂತೆ ಮಂಜೂರಾತಿ ನೀಡಿ ಅನುದಾನವನ್ನು ಬಿಡುಗಡೆ ಮಾಡಲಾಗಿದೆ.</td></tr>
<tr><td>ಈ)</td><td>ಹೆಚ್ಚುವರಿ ವಿಶೇಷ ಅನುದಾನ ಬಿಡುಗಡೆಗೆ ಸರ್ಕಾರ ಯಾವ ಕ್ರಮ ಕೈಗೊಂಡಿದೆ; (ಪೂರ್ಣ ವಿವರ ನೀಡುವುದು).</td></tr>
<tr><td>ಉ)</td><td>ಕೊಡಗು ಜಿಲ್ಲೆಯಲ್ಲಿ ಎಷ್ಟು ಗ್ರಾಮ ಪಂಚಾಯಿತಿಗಳಲ್ಲಿ ಖಾಯಂ ಪಂಚಾಯಿತಿ ಅಭಿವೃದ್ಧಿ ಅಧಿಕಾರಿಗಳು ಕರ್ತವ್ಯ ನಿರ್ವಹಿಸುತ್ತಿದ್ದಾರೆ; ಖಾಲಿ ಇರುವ ಪಂಚಾಯಿತಿ ಅಭಿವೃದ್ಧಿ ಅಧಿಕಾರಿಗಳ ಹುದ್ದೆಯನ್ನು ಯಾವಾಗ ಭರ್ತಿ ಮಾಡಲಾಗುವುದು? (ಪೂರ್ಣ ವಿವರ ನೀಡುವುದು).</td><td>ಕೊಡಗು ಜಿಲ್ಲೆಗೆ 104 ಪಂಚಾಯತಿ ಅಭಿವೃದ್ಧಿ ಅಧಿಕಾರಿ ಹುದ್ದೆಗಳು ಮಂಜೂರಾಗಿದ್ದು, 79 ನೌಕರರು ಕರ್ತವ್ಯ ನಿರ್ವಹಿಸುತ್ತಿದ್ದು, 25 ಹುದ್ದೆಗಳು ಖಾಲಿ ಇರುತ್ತವೆ.<br><br>ಪಂಚಾಯತಿ ಅಭಿವೃದ್ಧಿ ಅಧಿಕಾರಿ ವೃಂದಕ್ಕೆ ಜಿಲ್ಲಾ ಪಂಚಾಯತಿ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಯವರು ನೇಮಕಾತಿ ಪ್ರಾಧಿಕಾರ ಆಗಿದ್ದು, ಗ್ರಾಮ ಪಂಚಾಯತಿ ಕಾರ್ಯದರ್ಶಿ ಗ್ರೇಡ್-1 ವೃಂದದ ಅರ್ಹ ನೌಕರರು ಲಭ್ಯವಾದಂತೆ ಜೇಷ್ಠತೆ ಮತ್ತು ಅರ್ಹತೆ ಆಧಾರದ ಮೇಲೆ ಮುಂಬಡ್ತಿ ಮೂಲಕ ಭರ್ತಿ ಮಾಡಲು ಸರ್ಕಾರದಿಂದ ಎಲ್ಲಾ ಜಿಲ್ಲಾ ಪಂಚಾಯತಿಗಳ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳಿಗೆ ನಿರ್ದೇಶನ ನೀಡಲಾಗಿದೆ.</td></tr>
</table>

ಸಂ:ಗ್ರಾಕುನೀ&ನೈಇ 434 ಗ್ರಾನೀಸ(4)2022

(ಬಸವರಾಜ ಬೊಮ್ಮಾಯಿ)
ಮುಖ್ಯಮಂತ್ರಿ

ಚುಕ್ಕೆ ರಹಿತ ಪ್ರಶ್ನೆ ಸಂಖ್ಯೆ:581 ಕೆ ಲಗತ್ತು

ಅನುಬಂಧ

| ಕ್ರ ಸಂ. | ಜಿಲ್ಲೆ | ಕ್ರ.ಸಂ. | ವಿಧಾನಸಭಾ ಕ್ಷೇತ್ರ | ಮಳೆ ಪರಿಹಾರ (ರೂ. ಕೋಟಿಗಳಲ್ಲಿ) | | | | | | | |
|---|---|---|---|---|---|---|---|---|---|---|---|
| | | | | 2019-20 | | 2020-21 | | 2021-22 | | ಒಟ್ಟು | |
| | | | | ಹಂಚಿಕೆ | ಬಿಡುಗಡೆ | ಹಂಚಿಕೆ | ಬಿಡುಗಡೆ | ಹಂಚಿಕೆ | ಬಿಡುಗಡೆ | ಹಂಚಿಕೆ | ಬಿಡುಗಡೆ |
| 1 | ಕೊಡಗು | 1 | ವೀರಾಜಪೇಟೆ | 19.08 | 9.56 | 0.00 | 0.00 | 5.00 | 0.00 | 24.08 | 9.56 |
| | | 2 | ಮಡಿಕೇರಿ | 18.86 | 4.77 | 0.00 | 0.00 | 5.00 | 0.00 | 23.86 | 4.77 |
| | | 3 | ಕೊಡಗು | 1.00 | 0.55 | 0.00 | 0.00 | 5.50 | 0.00 | 6.50 | 0.55 |
| ಒಟ್ಟು | | | | 38.94 | 14.88 | 0.00 | 0.00 | 15.50 | 0.00 | 54.44 | 14.88 |

| ಕ್ರ ಸಂ. | ಜಿಲ್ಲೆ | ಕ್ರ.ಸಂ. | ವಿಧಾನಸಭಾ ಕ್ಷೇತ್ರ | 2019-20 ವಿಶೇಷ ಅನುದಾನ (ಯಡಿಯೂರಪ್ಪ ಸರ್ಕಾರ) | | 2021-22 ವಿಶೇಷ ಅನುದಾನ (ಯಡಿಯೂರಪ್ಪ ಸರ್ಕಾರ & ಬಸವರಾಜ ಬೊಮ್ಮಾಯಿ ಸರ್ಕಾರ) | | 2022-23 ವಿಶೇಷ ಅನುದಾನ (ಬಸವರಾಜ ಬೊಮ್ಮಾಯಿ ಸರ್ಕಾರ) | | ಒಟ್ಟು ವಿಶೇಷ ಅನುದಾನ | |
|---|---|---|---|---|---|---|---|---|---|---|---|
| | | | | ಹಂಚಿಕೆ | ಬಿಡುಗಡೆ | ಹಂಚಿಕೆ | ಬಿಡುಗಡೆ | ಹಂಚಿಕೆ | ಬಿಡುಗಡೆ | ಹಂಚಿಕೆ | ಬಿಡುಗಡೆ |
| 1 | ಕೊಡಗು | 1 | ವೀರಾಜಪೇಟೆ | 7.00 | 5.00 | 35.00 | 3.00 | 0.00 | 0.00 | 43.00 | 8.00 |
| | | 2 | ಮಡಿಕೇರಿ | 3.00 | 2.00 | 30.00 | 2.00 | 0.00 | 0.00 | 35.00 | 4.00 |
| | | 3 | ಕೊಡಗು | 0.00 | 0.00 | 5.00 | 0.00 | 0.00 | 0.00 | 8.00 | 0.00 |
| ಒಟ್ಟು | | | | 10.00 | 7.00 | 70.00 | 5.00 | 0.00 | 0.00 | 80.00 | 12.00 |

# ಕರ್ನಾಟಕ ವಿಧಾನಸಭೆ

1. ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 583
2. ಮಾನ್ಯ ವಿಧಾನ ಸಭೆ ಸದಸ್ಯರ ಹೆಸರು : ಶ್ರೀ ಅಪ್ಪಚ್ಚು (ರಂಜನ್) ಎಂ.ಪಿ. (ಮಡಿಕೇರಿ)
3. ಉತ್ತರಿಸುವ ದಿನಾಂಕ : 13-09-2022
4. ಉತ್ತರಿಸುವ ಸಚಿವರು. : ಗೃಹ ಸಚಿವರು.

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ | ಕೊಡಗು ಜಿಲ್ಲೆಯ ಪೊಲೀಸ್ ಇಲಾಖೆಯಲ್ಲಿ ಕಳೆದ 3 ವರ್ಷಗಳಲ್ಲಿ ಎಷ್ಟು ಪ್ರಕರಣಗಳು ದಾಖಲಾಗಿವೆ; ಎಷ್ಟು ಪತ್ತೆಯಾಗಿವೆ; ಪತ್ತೆಯಾಗದ ಪ್ರಕರಣಗಳನ್ನು ಪತ್ತೆ ಹಚ್ಚಲು ಸರ್ಕಾರ ತೆಗೆದುಕೊಂಡ ಕ್ರಮವೇನು; (ಪೂರ್ಣ ವಿವರ ನೀಡುವುದು) | ಕೊಡಗು ಜಿಲ್ಲೆಯಲ್ಲಿ ಪತ್ತೆಯಾಗದ ಡಕಾಯಿತಿ, ಸುಲಿಗೆ, ದರೋಡೆ ಮತ್ತು ಇತರೆ ಕನ್ನ-ಕಳವು ಮುಂತಾದ ಅಪರಾಧ ಪ್ರಕರಣಗಳನ್ನು ಪತ್ತೆ ಮಾಡುವ ಬಗ್ಗೆ ಜಿಲ್ಲೆಯ ಎಲ್ಲಾ ಪೊಲೀಸ್ ಠಾಣೆಯ ನುರಿತ ಅಪರಾಧ ಪತ್ತೆ ಸಿಬ್ಬಂದಿಗಳನ್ನು ನೇಮಿಸಿ ಪ್ರಕರಣಗಳನ್ನು ಪತ್ತೆ ಹಚ್ಚಲು ಹೆಚ್ಚಿನ ಮುತುವರ್ಜಿ ವಹಿಸಿ ಕ್ರಮ ಕೈಗೊಳ್ಳಲಾಗುತ್ತಿರುತ್ತದೆ. ಅಲ್ಲದೆ ಜಿಲ್ಲೆಯ ಎಲ್ಲಾ ವೃತ್ತವಾರು ಮತ್ತು ಉಪ-ವಿಭಾಗವಾರು ಪಿಐ/ಸಿಪಿಐ ಮತ್ತು ಡಿವೈಎಸ್‌ಪಿ ರವರುಗಳ ನೇತೃತ್ವದಲ್ಲಿ ನುರಿತ ಅಪರಾಧ ಪತ್ತೆ ಕರ್ತವ್ಯದ ಸಿಬ್ಬಂದಿಗಳ ತಂಡವನ್ನು ರೂಪಿಸಿಕೊಂಡು ಪತ್ತೆಯಾಗದ ಅಪರಾಧ ಪ್ರಕರಣಗಳನ್ನು ಪತ್ತೆ ಹಚ್ಚಲು ಅಗತ್ಯ ಕ್ರಮ ಕೈಗೊಳ್ಳಲಾಗುತ್ತಿರುತ್ತದೆ. ಹಾಗೂ ಜಿಲ್ಲಾ ಮಟ್ಟದಲ್ಲಿ ನುರಿತ ಅಪರಾಧ ಪತ್ತೆ ಕರ್ತವ್ಯದ ಸಿಬ್ಬಂದಿಗಳ ತಂಡವನ್ನು ರೂಪಿಸಿಕೊಂಡು ಜಿಲ್ಲಾ ವ್ಯಾಪ್ತಿಯಲ್ಲಿ ನಡೆಯುವ ಕಾನೂನು ಬಾಹಿರ ಚಟುವಟಿಕೆಗಳನ್ನು ಪತ್ತೆ ಮಾಡುವುದು ಮತ್ತು ಜಿಲ್ಲೆಯಲ್ಲಿ ಪತ್ತೆಯಾಗದ ಅಪರಾಧ ಪ್ರಕರಣಗಳನ್ನು ಪತ್ತೆ ಹಚ್ಚಲು ಕ್ರಮ ಕೈಗೊಳ್ಳಲಾಗುತ್ತಿರುತ್ತದೆ. |

ವಿವರಣ ಪಟ್ಟಿ:

| ವರ್ಷ | ದಾಖಲಾದ ಒಟ್ಟು ಪ್ರಕರಣಗಳು | ಪತ್ತೆ ಹಚ್ಚಿದ ಪ್ರಕರಣಗಳು | ಪತ್ತೆಗೆ ಬಾಕಿ ಇರುವ ಪ್ರಕರಣಗಳು |
|---|---|---|---|
| 2019 | 1872 | 1767 | 105 |
| 2020 | 1681 | 1599 | 82 |
| 2021 | 1684 | 1617 | 67 |
| 2022 (31/08/2022) | 1122 | 870 | 252 |

| ಆ | ಈ ಜಿಲ್ಲೆಯಲ್ಲಿ ಎಷ್ಟು ಪೋಲೀಸ್ ಠಾಣೆಗಳಲ್ಲಿ ಸಿಸಿ ಕ್ಯಾಮರಾ ಅಳವಡಿಸಲಾಗಿದೆ; ಬಾಕಿ ಇರುವ ಠಾಣೆಗಳಿಗೆ ಯಾವ ಕಾಲಮಿತಿಯಲ್ಲಿ ಸಿಸಿ ಕ್ಯಾಮರಾವನ್ನು ಅಳವಡಿಸಲಾಗುತ್ತದೆ.(ಪೂರ್ಣ ವಿವರ ನೀಡುವುದು) | ಕೊಡಗು ಜಿಲ್ಲೆಯಲ್ಲಿರುವ ಒಟ್ಟು 20 (ಕಾ & ಸು, ಸಿ.ಇ.ಎನ್, ಮಹಿಳಾ ಹಾಗೂ ಸಂಚಾರ) ಪೋಲೀಸ್ ಠಾಣೆಗಳು ಸೇರಿದಂತೆ ತಲಾ ನಾಲ್ಕು ಕ್ಯಾಮರಾಗಳಂತೆ ಈಗಾಗಲೇ ಅಳವಡಿಸಲಾಗಿರುತ್ತದೆ. |
|---|---|---|
| ಇ | ಮಡಿಕೇರಿ ನಗರ, ಸೋಮವಾರಪೇಟೆ ಪಟ್ಟಣ, ಕುಶಾಲನಗರ ಪಟ್ಟಣಗಳ ವ್ಯಾಪ್ತಿಯಲ್ಲಿ ಎಷ್ಟು ಸಿಸಿ ಕ್ಯಾಮರಾಗಳನ್ನು ಅಳವಡಿಸಲಾಗಿದೆ; | ಮಡಿಕೇರಿ ನಗರದಲ್ಲಿ ಸಾರ್ವಜನಿಕ ರಕ್ಷಣಾ ಕಾಯ್ದೆ ಪ್ರಕಾರ ಖಾಸಗಿ ಘಟಕಗಳಿಂದ 95 ಸಿಸಿ ಕ್ಯಾಮರಾಗಳನ್ನು ಅಳವಡಿಸಲಾಗಿದ್ದು, ಇದರೊಂದಿಗೆ 10 ಸಂಖ್ಯೆಯ ಸಿಸಿ ಕ್ಯಾಮರಾಗಳನ್ನು ಪೋಲೀಸ್ ಇಲಾಖೆಯಿಂದ ಅಳವಡಿಸಲಾಗಿರುತ್ತದೆ. ಸೋಮವಾರಪೇಟೆ ಪಟ್ಟಣದಲ್ಲಿ ಸಾರ್ವಜನಿಕ ರಕ್ಷಣಾ ಕಾಯ್ದೆ ಪ್ರಕಾರ ಖಾಸಗಿ ಘಟಕಗಳಿಂದ 48 ಸಿಸಿ ಕ್ಯಾಮರಾಗಳನ್ನು, ಕುಶಾಲನಗರ ಪಟ್ಟಣದಲ್ಲಿ ಸಾರ್ವಜನಿಕ ರಕ್ಷಣಾ ಕಾಯ್ದೆ ಪ್ರಕಾರ ಖಾಸಗಿ ಘಟಕಗಳಿಂದ 55 ಸಿಸಿ ಕ್ಯಾಮರಾಗಳನ್ನು ಅಳವಡಿಸಲಾಗಿದೆ. |
| ಈ | ಕೆಲವು ಕಡೆ ಸಿಸಿ ಕ್ಯಾಮರಾ ಚಾಲನೆಯಲ್ಲಿರದೇ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಕಾರಣವೇನು; | ಪೋಲೀಸ್ ಇಲಾಖೆಯಿಂದ ಅಳವಡಿಸಿದ ಕ್ಯಾಮರಾಗಳಿಗೆ ವಾರ್ಷಿಕ ನಿರ್ವಹಣೆ (AMC) ಇದ್ದು ಆಗಿಂದಾಗ್ಗೆ ದುರಸ್ಥಿ ಮಾಡಿಸಲಾಗುತ್ತಿದೆ. ಸಾರ್ವಜನಿಕರು ಅಳವಡಿಸಿದ ಕ್ಯಾಮರಾಗಳನ್ನು ಅವರುಗಳಿಗೆ ತಿಳಿಸಿ, ದುರಸ್ಥಿಗೊಳಿಸಲಾಗುತ್ತಿದೆ. |
| ಉ | ಪಟ್ಟಣಗಳಲ್ಲಿ ಸಿಸಿ ಕ್ಯಾಮರಾ ಆಳವಡಿಸಿದಲ್ಲಿ ಅಪರಾಧವನ್ನು ತಡೆಯಲು ಅವಕಾಶ ವಾಗುವುದರಿಂದ ಈ ಬಗ್ಗೆ ಸರ್ಕಾರ ತೆಗೆದು ಕೊಂಡ ಕ್ರಮವೇನು?<br>(ಪೂರ್ಣ ವಿವರ ನೀಡುವುದು) | ಸಾರ್ವಜನಿಕ ರಕ್ಷಣಾ ಕಾಯ್ದೆ ಪ್ರಕಾರ ಖಾಸಗಿ ಘಟಕಗಳಿಂದ ವ್ಯಾಪಾರ ಉದ್ಯಮಗಳು ಮತ್ತು ವಾಣಿಜ್ಯ ಉದ್ಯಮಗಳಿಂದ ಸಿಸಿ ಕ್ಯಾಮರಗಳನ್ನು ಆಳವಡಿಸಲಾಗಿರುತ್ತದೆ. ಇದಲ್ಲದೆ, ಮಾನ್ಯ ಸಂಸದರು ಮತ್ತು ಮಾನ್ಯ ಶಾಸಕರ ಅನುದಾನದಿಂದ ಮತ್ತು ಜಿಲ್ಲಾಡಳಿತವತಿಯಿಂದ ಸಿಸಿ ಕ್ಯಾಮರಾವನ್ನು ಅಳವಡಿಸಿ ಅಪರಾಧ ತಡೆಗಟ್ಟಲು ಕ್ರಮ ಕೈಗೊಳ್ಳಲಾಗುತ್ತಿದೆ. |

HD 52 PCQ 2022

(ಆರಗ ಜ್ಞಾನೇಂದ್ರ)
ಗೃಹ ಸಚಿವರು.

# ಕರ್ನಾಟಕ ವಿಧಾನ ಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 593 |
| ಸದಸ್ಯರ ಹೆಸರು | : | ಶ್ರೀ ಬಾಲಕೃಷ್ಣ ಸಿ.ಎನ್.<br>(ಶ್ರವಣಬೆಳಗೊಳ) |
| ಉತ್ತರಿಸಬೇಕಾದ ದಿನಾಂಕ | : | 13.09.2022. |
| ಉತ್ತರಿಸುವ ಸಚಿವರು | : | ಮಾನ್ಯ ಜಲಸಂಪನ್ಮೂಲ ಸಚಿವರು |

| ಕ್ರ. ಸಂ. | ಪ್ರಶ್ನೆಗಳು | ಉತ್ತರಗಳು |
|---|---|---|
| ಅ) | ಕಳೆದ ಒಂದು ವರ್ಷದಿಂದ ಎಷ್ಟು ಎಕರೆ ಪ್ರದೇಶಕ್ಕೆ ನೀರಾವರಿ ಸಾಮರ್ಥ್ಯವನ್ನು ಕಲ್ಪಿಸಲಾಗಿದೆ (ಜಿಲ್ಲಾವಾರು ಮತ್ತು ತಾಲ್ಲೂಕುವಾರು ಮಾಹಿತಿ ನೀಡುವುದು). | ಜಲ ಸಂಪನ್ಮೂಲ ಇಲಾಖೆ (ಭಾರಿ ಮತ್ತು ಮಧ್ಯಮ ನೀರಾವರಿ)ಯ ಅಡಿಯಲ್ಲಿನ ನಿಗಮವಾರು ವಿವರಗಳನ್ನು ಅನುಬಂಧ –1ರಲ್ಲಿ ನೀಡಲಾಗಿದೆ. |
| ಆ) | ಈ ನೀರಾವರಿ ಸಾಮರ್ಥ್ಯವನ್ನು ಕಲ್ಪಿಸಲು ಕಳೆದ ಒಂದು ವರ್ಷದಿಂದ ವೆಚ್ಚವಾಗಿರುವ ಹಣವೆಷ್ಟು; ಯಾವ ಯೋಜನೆಗಳಿಗೆ ಎಷ್ಟು ಹಣವನ್ನು ವೆಚ್ಚ ಮಾಡಲಾಗಿದೆ (ಸಂಪೂರ್ಣ ಮಾಹಿತಿ ನೀಡುವುದು); | |

ಜಸಂಇ 127 ಎಂಎಲ್ಎ 2022

(ಗೋವಿಂದ ಎಂ. ಕಾರಜೋಳ)
ಜಲಸಂಪನ್ಮೂಲ ಸಚಿವರು

## ಮಾನ್ಯ ವಿಧಾನಸಭಾ ಸದಸ್ಯರಾದ ಶ್ರೀ ಬಾಲಕೃಷ್ಣ ಸಿ.ಎಸ್. (ಶ್ರವಣಬೆಳಗೊಳ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 593ಕ್ಕೆ ಅನುಬಂಧ –1

| ಕ್ರ. ಸಂ. | ಯೋಜನೆ ಹೆಸರು | ಜಿಲ್ಲೆ | ತಾಲ್ಲೂಕು | 2021–22ನೇ ಸಾಲಿನಲ್ಲಿ ಯೋಜನೆಗಳಡಿ ನೀರಾವರಿ ಸಾಮರ್ಥ್ಯ ಕಲ್ಪಿಸಲು ಭರಿಸಲಾದ ವೆಚ್ಚ (ರೂ. ಕೋಟಿಗಳಲ್ಲಿ) | 2021–22ನೇ ಸಾಲಿನಲ್ಲಿ ಸೃಜಿಸಲಾದ ನೀರಾವರಿ ಸಾಮರ್ಥ್ಯ (ಎಕರೆಗಳಲ್ಲಿ) |
|---|---|---|---|---|---|
| | **ಕೃಷ್ಣ ಭಾಗ್ಯ ಜಲ ನಿಗಮ ನಿಯಮಿತ** | | | | |
| 1 | ಮುಳವಾಡ ಏತ ನೀರಾವರಿ ಯೋಜನೆ | ವಿಜಯಪುರ | ಬಸವನ ಬಾಗೇವಾಡಿ & ಬಬಲೇಶ್ವರ | 266.04 | 14826 |
| 2 | ಚಿಮ್ಮಲಗಿ ಏತ ನೀರಾವರಿ ಯೋಜನೆ | ವಿಜಯಪುರ | ಇಂಡಿ & ದೇವರಹಿಪ್ಪರಗಿ | 16.31 | 1420 |
| 3 | ಇಂಡಿ ನೀರಾವರಿ ಯೋಜನೆ – ವಿಸ್ತರಣೆ | ವಿಜಯಪುರ | ಇಂಡಿ | 6.76 | 988 |
| 4 | ನಾರಾಯಣಪೂರ ಬಲದಂಡೆ ಕಾಲುವೆ ವಿಸ್ತರಣೆ | ರಾಯಚೂರು | ದೇವದುರ್ಗ & ರಾಯಚೂರು | 79.01 | 4015 |
| 5 | ಚಡಚಣ ಏತ ನೀರಾವರಿ ಯೋಜನೆ | ವಿಜಯಪುರ | ನಾಗಠಾಣ | 86.17 | 11428 |
| | **ಕರ್ನಾಟಕ ನೀರಾವರಿ ನಿಗಮ ನಿಯಮಿತ** | | | | |
| 6 | ತುಬಚಿ ಬಬಲೇಶ್ವರ ಏತ ನೀರಾವರಿ ಯೋಜನೆ | ವಿಜಯಪುರ, ಬಾಗಲಕೋಟೆ, ಬೆಳಗಾವಿ | ವಿಜಯಪುರ, ಜಮಖಂಡಿ, ಅಥಣಿ | 410.86 | 17072 |
| 7 | ಮುರುಗೋಡ ಏತ ನೀರಾವರಿ ಯೋಜನೆ | ಬೆಳಗಾವಿ | ಸವದತ್ತಿ | 8.95 | 4544 |
| 8 | ಸಿಂಗಟಾಲೂರು ಏತ ನೀರಾವರಿ ಯೋಜನೆ | ಗದಗ, ಕೊಪ್ಪಳ | ಶಿರಹಟ್ಟಿ, ಕೊಪ್ಪಳ, ಯಲಬುರ್ಗಾ | 312.48 | 4942 |
| | **ವಿಶ್ವೇಶ್ವರಯ್ಯ ಜಲ ನಿಗಮ ನಿಯಮಿತ** | | | | |
| 9 | ತರೀಕೆರೆ ಏತ ನೀರಾವರಿ ಯೋಜನೆ | ಚಿಕ್ಕಮಗಳೂರು | ತರೀಕೆರೆ | 77.15 | 24444 |

# ಕರ್ನಾಟಕ ವಿಧಾನ ಸಭೆ

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 594
2. ಸದಸ್ಯರ ಹೆಸರು : ಶ್ರೀ ಬಾಲಕೃಷ್ಣ ಸಿ.ಎನ್.
3. ಉತ್ತರಿಸಬೇಕಾದ ದಿನಾಂಕ : 13.09.2022

| ಕ್ರ. ಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| ಅ) | ಇತ್ತೀಚೆಗೆ ಸುರಿದ ಭಾರಿ ಮಳೆಯಿಂದಾಗಿ ಶ್ರವಣಬೆಳಗೊಳ ವಿಧಾನಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿ ಬರುವ ಹೇಮಾವತಿ ಅಚ್ಚುಕಟ್ಟು ವ್ಯಾಪ್ತಿಯ ಎಷ್ಟು ಕಿ.ಮೀ. ರಸ್ತೆ ಹಾಳಾಗಿದೆ; (ಸಂಪೂರ್ಣ ವಿವರ ನೀಡುವುದು) | ದಿನಾಂಕ:31.07.2022 ರಿಂದ 11.08.2022 ರವರೆಗೆ ಸುರಿದ ಭಾರಿ ಮಳೆಯಿಂದ ಶ್ರವಣಬೆಳಗೊಳ ವಿಧಾನ ಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿ ಬರುವ ಹೇಮಾವತಿ ಅಚ್ಚುಕಟ್ಟು ವ್ಯಾಪ್ತಿಯಲ್ಲಿ ಒಟ್ಟು 52.00 ಕಿ.ಮೀ. ರಸ್ತೆ ಹಾಳಾಗಿರುತ್ತದೆ. (ವಿವರಗಳನ್ನು ಅನುಬಂಧದಲ್ಲಿ ಲಗತ್ತಿಸಿದೆ) |
| ಆ) | ಹಾಳಾಗಿರುವ ರಸ್ತೆಗಳನ್ನು ದುರಸ್ತಿಪಡಿಸಲು ಸರ್ಕಾರ ತೆಗೆದುಕೊಂಡಿರುವ ಕ್ರಮಗಳೇನು; | ದಿನಾಂಕ:31.07.2022 ರಿಂದ 11.08.2022 ರವರೆಗೆ ಮಂಡ್ಯ, ಹಾಸನ ಮತ್ತು ತುಮಕೂರು, ಜಿಲ್ಲೆಗಳಲ್ಲಿ ವಾಡಿಕೆಗಿಂತ ಹೆಚ್ಚಿನ ಪ್ರಮಾಣದ ಮಳೆಯಾಗಿದ್ದು, ಇದರಿಂದ ಮುಖ್ಯ ನಾಲೆಗಳು ಮತ್ತು ವಿತರಣಾ ನಾಲೆಗಳು, ಅಚ್ಚುಕಟ್ಟು ರಸ್ತೆಗಳು, ಮಣ್ಣು ಏರಿ, ತಡೆಗೋಡೆಗಳು, ಕೆರೆಗಳ ಏರಿಗಳು ಇತ್ಯಾದಿ ನೀರಾವರಿ ಮೂಲಸೌಕರ್ಯಗಳಿಗೆ ಹಾನಿ ಉಂಟಾಗಿರುತ್ತದೆ. ಮಳೆಯಿಂದ ಹಾನಿಗೊಳಗಾಗಿರುವ ಜಲಸಂಪನ್ಮೂಲ ಇಲಾಖೆಯ ಆಸ್ತಿಗಳನ್ನು ತಾತ್ಕಾಲಿಕವಾಗಿ ಪುನರ್‌ಸ್ಥಾಪಿಸುವ ಕಾಮಗಾರಿಗಳನ್ನು ಅನುಷ್ಠಾನಗೊಳಿಸಲು ದಿನಾಂಕ:29.08.2022ರಂದು ರೂ.50.00 ಕೋಟಿ ಮೊತ್ತವನ್ನು 2022-23ನೇ ಸಾಲಿಗೆ ಕಾವೇರಿ ನೀರಾವರಿ ನಿಗಮಕ್ಕೆ ಒದಗಿಸಲಾದ ಬಂಡವಾಳ ಲೆಕ್ಕ ಶೀರ್ಷಿಕೆಯ ಅನುದಾನದಲ್ಲಿ ಭರಿಸಲು ಅನುಮೋದನೆ ನೀಡಲಾಗಿರುತ್ತದೆ.<br><br>ಅದರಂತೆ, ಹೇಮಾವತಿ ಯೋಜನಾ ವಲಯ, ಗೊರೂರು ವಲಯಕ್ಕೆ ರೂ.17.50 ಕೋಟಿ ಅನುದಾನವನ್ನು ಹಂಚಿಕೆ ಮಾಡಲಾಗಿದ್ದು, ಮೊದಲನೇ ಹಂತದಲ್ಲಿ ಸದರಿ ಅಚ್ಚುಕಟ್ಟು ವ್ಯಾಪ್ತಿಯಲ್ಲಿ ಹಾನಿಗೊಳಗಾಗಿರುವ ಕೆರೆಗಳ ಏರಿಗಳು, ಮುಖ್ಯ ನಾಲೆಗಳ ಮತ್ತು ವಿತರಣಾ ನಾಲೆಗಳ ದುರಸ್ತಿ, ಲೈನಿಂಗ್ ಕಾಮಗಾರಿಗಳನ್ನು ಆದ್ಯತೆ ಮೇರೆಗೆ ಕೈಗೊಂಡು ಇವುಗಳನ್ನು ಪುನರ್‌ಸ್ಥಾಪಿಸಲು ಕ್ರಮ ವಹಿಸಲಾಗುತ್ತಿದೆ. ಮುಂದುವರೆದು, ಅಚ್ಚುಕಟ್ಟು ವ್ಯಾಪ್ತಿಯಲ್ಲಿ ಹಾನಿಗೊಳಗಾಗಿರುವ ಇನ್ನಿತರೆ ರಸ್ತೆ ಕಾಮಗಾರಿಗಳನ್ನು ಅನುದಾನದ ಲಭ್ಯತೆಯ ಅನುಸಾರವಾಗಿ ಆದ್ಯತೆ ಮೇರೆಗೆ ಪುನರ್‌ಸ್ಥಾಪಿಸಲು ಪರಿಶೀಲಿಸಲಾಗುವುದು. |
| ಇ) | ಹಾಳಾಗಿರುವ ರಸ್ತೆಗಳಿಂದ ಸಾರ್ವಜನಿಕರಿಗೆ ವಾಹನ ಸವಾರರಿಗೆ ಮತ್ತು ರೈತರುಗಳಿಗೆ ಸಂಚರಿಸಲು ತೊಂದರೆಯಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ ಸರ್ಕಾರ ತೆಗೆದುಕೊಂಡಿರುವ ಕ್ರಮಗಳೇನು; | |
| ಈ) | ಹಾಳಾಗಿರುವ ರಸ್ತೆಗಳನ್ನು ದುರಸ್ತಿಪಡಿಸಲು ಸರ್ಕಾರ ಅನುದಾನವೇನಾದರೂ ಬಿಡುಗಡೆ ಮಾಡಿದೆಯೇ; ಮಾಡಿದಲ್ಲಿ ಸದರಿ ಕ್ಷೇತ್ರಕ್ಕೆ ಎಷ್ಟು ಅನುದಾನ ನೀಡಲಾಗಿದೆ? | |

ಸಂಖ್ಯೆ:ಜಸಂಇ 96 ಎನ್‌ಎಲ್‌ಎ 2022

(ಗೋವಿಂದ ಎಂ. ಕಾರಜೋಳ)
ಜಲಸಂಪನ್ಮೂಲ ಸಚಿವರು

ಅನುಬಂಧ

## Rain damage works details

| Sl. No | District | Constituency | Name of the Rain damage Work | Estimated cost in Lakhs | Length in KM | Remarks |
|---|---|---|---|---|---|---|
| 1 | 2 | 3 | 4 | 5 | 6 | 7 |
| 1 | Hassan | Shravanabelagola | Repairs to road from Gollarahosahally to Heggadigere village coming under RBC of BNT approach LIS. | 20.00 | 1.50 | Road |
| 2 | Hassan | Shravanabelagola | Repairs to road from Bhaktharahally colony to Chavvenahally village coming under RBC of BNT Exit LIS. | 15.00 | 1.00 | Road |
| 3 | Hassan | Shravanabelagola | Repairs to road from K.Chowdenahally to Nuggehally road coming under Nuggehally LIS | 20.00 | 1.50 | Road |
| 4 | Hassan | Shravanabelagola | Repairs to road from RBC canal at ch:6.50 km to Chokenahally village road coming under BNT Exit LIS | 15.00 | 1.00 | Road |
| 5 | Hassan | Shravanabelagola | Repairs to connecting road to BNT Exit LIS Pump house. | 10.00 | 1.00 | Road |
| 6 | Hassan | Shravanabelagola | Repairs to connecting road to Distribution chamber coming under 19 tanks LIS. | 20.00 | 2.00 | Road |
| 7 | Hassan | Shravanabelagola | Repairs to connecting road from Bhaktharahally to Distribution chamber coming under BNT Exit LIS | 10.00 | 1.00 | Road |
| 8 | Hassan | Shravanabelagola | Repairs to connecting road from B.Vaddarahatti to Thagadur village coming under Nuggehally LIS | 10.00 | 1.00 | Road |
| 9 | Hassan | Shravanabelagola | Repairs to connecting road from Obalapura to Thagadur village coming under LBC of BNT approach LIS. | 15.00 | 1.00 | Road |
| 10 | Hassan | Shravanabelagola | Repairs to connecting road from LBC BNT apprach canal at ch:4.50 km to Obalapura village coming under LBC of BNT approach LIS. | 10.00 | 1.00 | Road |
| 11 | Hassan | Shravanabelagola | Repairs to connecting road from Obalapura village to Govinakere village coming under LBC of BNT approach LIS. | 20.00 | 2.00 | Road |
| 12 | Hassan | Shravanabelagola | Repairs to connecting road from Bagur Kembal road to Krishnapura village coming under LBC of BNT approach LIS. | 10.00 | 1.50 | Road |
| 13 | Hassan | Shravanabelagola | Repairs to connecting road from Dyavanuru village to Bagur tank coming under LBC of BNT approach LIS. | 10.00 | 1.00 | Road |
| 14 | Hassan | Shravanabelagola | Repairs to connecting road from Hoovinahally to Mulkere village coming under Nuggehally LIS. | 15.00 | 1.00 | Road |
| 15 | Hassan | Shravanabelagola | Repairs to damaged portion of service road of D-39 under HLBC | 5.00 | 0.50 | Road |

| Sl. No | District | Constituency | Name of the Rain damage Work | Estimated cost in Lakhs | Length in KM | Remarks |
|---|---|---|---|---|---|---|
| 16 | Hassan | Shravanabelagola | Repairs to damaged portion of service road of D-38 under HLBC | 5.00 | 0.50 | Road |
| 17 | Hassan | Shravanabelagola | Repairs to damaged road from Govinakere to Kasipura under BNT approach LIS | 10.00 | 1.00 | Road |
| 18 | Hassan | Shravanabelagola | Repairs to damaged road Kuradahally village under BNT approach LIS | 5.00 | 0.75 | Road |
| 19 | Hassan | Shravanabelagola | Repairs to damaged road from B.Honnenahally Anjaneyaswamy temple to K.Chowdenahally village under BNT approach LIS. | 5.00 | 0.75 | Road |
| 20 | Hassan | Shravanabelagola | Repairs to damaged road from B.Honnenahally center colony to Dyavanur village under BNT approach LIS | 10.00 | 1.00 | Road |
| 21 | Hassan | Shravanabelagola | Repairs to damaged portion road of Hemavathy Left Bank Canal from Ch 62.00Km to 72.00Km | 20.00 | 2.00 | Road |
| 22 | Hassan | Shravanabelagola | Repairs to damaged portion of service road of D-33 under HLBC | 10.00 | 1.00 | Road |
| 23 | Hassan | Shravanabelagola | Repairs to damaged portion of service road of D-34,D-35,D-36 and D-37 under HLBC | 5.00 | 0.80 | Road |
| 24 | Hassan | Shravanabelagola | Repairs to damaged portion of Sree Ramadevara North Canal from Ch 61.00Km to 75.00Km | 10.00 | 1.00 | Road |
| 25 | Hassan | Shravanabelagola | Repairs to Connecting road from Bagur road to Kalasinda village Coming Under D-36 of HLBC | 10.00 | 1.00 | Road |
| 26 | Hassan | Shravanabelagola | Repairs to Connecting road from 47th Km HLBC to Kallenahalli Gate. | 5.00 | 1.00 | Road |
| 27 | Hassan | Shravanabelagola | Repairs to Connecting road from Anekere School building to Eswara Temple Coming under D-28 of Hlbc | 5.00 | 0.80 | Road |
| 28 | Hassan | Shravanabelagola | Repairs to damaged portion road of Sagathavally waste weir under HLBC | 10.00 | 1.20 | Road |
| 29 | Hassan | Shravanabelagola | Repairs to road under Amanikere tank atchkat under HLBC | 20.00 | 2.00 | Road |
| 30 | Hassan | Shravanabelagola | Repairs to damaged portion road of Bediganahally tank bund | 10.00 | 1.20 | Road |
| 31 | Hassan | Shravanabelagola | Repairs to Service road from ch:0.00 to 5.00 km of D-46 under HLBC | 10.00 | 0.50 | Road |
| 32 | Hassan | Shravanabelagola | Repairs to Service road from ch:3.00 to 5.00 km of D-43 under HLBC | 10.00 | 2.00 | Road |

